CPMG / KA / BG-GPO/13/2003-2005

ಸುವರ್ಣ ಕರ್ನಾಟಕ 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ಸಂಪುಟ ೧೪೦ | ಬೆಂಗಳೂರು, ಗುರುವಾರ, ಜೂನ್ ೨೩, ೨೦೦೫ (ಆಷಾಢ ೨, ಶಕ ವರ್ಷ ೧೯೨೭) | ಸಂಚಿಕೆ ೨೫

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ:** ಶ್ರೀ ಕೆ. ರಾಜೇಂದ್ರ, ಪೀಠಾಧಿಕಾರಿ, ಆಹಾರ-3 ಶಾಖೆ, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಇವರನ್ನು ಅಮಾನತ್ತಿನಲ್ಲಿಡುವ ಬಗ್ಗೆ.

**ಓದಲಾಗಿದೆ:** 1. ಶ್ರೀ ಕೆ. ರಾಜೇಂದ್ರ, ಪೀಠಾಧಿಕಾರಿ, ಆಹಾರ-3 ಶಾಖೆ, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಇವರ ರಜಾ ಅರ್ಜಿ ದಿನಾಂಕ:16.5.2005.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಶ್ರೀ ಕೆ. ರಾಜೇಂದ್ರ, ಪೀಠಾಧಿಕಾರಿ, ಆಹಾರ-3 ಶಾಖೆ, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಇವರು ಮನವಿ ಸಲ್ಲಿಸಿ ಅವರ ಮಗ ಆರ್. ವಿನಯ್ ಇವರನ್ನು ಅನಾರೋಗ್ಯದ ಕಾರಣ ಆಸ್ಪತ್ರೆಯಲ್ಲಿ ದಾಖಲಿಸಿರುವುದರಿಂದ ಅವರ ಚಿಕಿತ್ಸೆ ಮತ್ತು ಆರೈಕೆಯನ್ನು ನೋಡಿಕೊಳ್ಳಲು ಮನೆಯಲ್ಲಿ ಬೇರೆ ಯಾರೂ ಇಲ್ಲದಿರುವುದರಿಂದ ದಿನಾಂಕ:6.5.2005ರಿಂದ 31.5.2005ರ ವರೆಗೆ 26 ದಿನಗಳ ಪರಿವರ್ತಿತ ರಜೆ ಹಾಗೂ ಗಳಿಕೆ ರಜೆಯನ್ನು ಮಂಜೂರು ಮಾಡಲು ಅರ್ಜಿ ಸಲ್ಲಿಸಿರುತ್ತಾರೆ.

ಈ ಅಧಿಕಾರಿಯವರು ಪೂರ್ವಾನುಮತಿ ಪಡೆಯದೆ ದೀರ್ಘಕಾಲದ ರಜೆಯ ಮೇಲೆ ತೆರಳಿರುವುದರಿಂದ ಕಛೇರಿಯ ಕೆಲಸಗಳಿಗೆ ತುಂಬಾ ಅಡಚಣೆಯಾಗಿದ್ದು ಸಾರ್ವಜನಿಕ ಹಿತದೃಷ್ಟಿಯಿಂದ ರಜೆಯನ್ನು ಶಿಫಾರಸ್ಸು ಮಾಡಲು ಪರಿಗಣಿಸಿಲ್ಲವೆಂದು ತಿಳಿಸಿ ಕೂಡಲೇ ಕರ್ತವ್ಯಕ್ಕೆ ಹಾಜರಾಗಲು ದಿನಾಂಕ:18.5.2005ರಂದು ಮೆಮೋ ನೀಡಲಾಗಿತ್ತು. ತಪ್ಪಿದಲ್ಲಿ ಅನಧಿಕೃತ ಗೈರು ಹಾಜರಿ ಎಂದು ಪರಿಗಣಿಸಿ ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ, ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11ರನ್ವಯ ಶಿಸ್ತುಕ್ರಮ ಜರುಗಿಸಲಾಗುವುದೆಂದು ಸಹ ತಿಳಿಸಲಾಗಿತ್ತು.

ಪೂರ್ವಾನುಮತಿ ಪಡೆಯದೆ ಕೆಲಸಕ್ಕೆ ಅನಧಿಕೃತ ಗೈರು ಹಾಜರಾಗಿರುವ ಈ ದುರ್ನಡತೆಯಿಂದ ಕಛೇರಿಯ ಕೆಲಸಕ್ಕೆ ತೊಂದರೆಯಾಗಿರುತ್ತದೆ. ಆದ್ದರಿಂದ ಇವರನ್ನು ಅಮಾನತ್ತುಗೊಳಿಸಲು ಸರ್ಕಾರ ನಿರ್ಧರಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆನಾಸ 110 ಇಭತ 2005, ಬೆಂಗಳೂರು, ದಿನಾಂಕ: 23ನೇ ಮೇ 2005**

ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ, ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 10(1)(ಎ)ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಕೆ. ರಾಜೇಂದ್ರ, ಪೀಠಾಧಿಕಾರಿ, ಆಹಾರ-3 ಶಾಖೆ, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಬೆಂಗಳೂರು ಇವರನ್ನು ಇಲಾಖಾ ವಿಚಾರಣೆ/ಶಿಸ್ತುಕ್ರಮವನ್ನು ಬಾಕಿಯಿರಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಅಮಾನತ್ತಿನಲ್ಲಿರಿಸಲಾಗಿದೆ.

ಈ ಅಧಿಕಾರಿಯು ಅಮಾನತ್ತಿನ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98ರನ್ವಯ ಜೀವನಾಧಾರ ಭತ್ಯೆ ಪಡೆಯಲು ಅರ್ಹರಾಗಿರುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಯು ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿಯಿಲ್ಲದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೌಶಿಕ್ ಮುಖರ್ಜಿ**

ಸರ್ಕಾರದ ಪ್ರಧಾನ ಕಾರ್ಯದರ್ಶಿ,

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

ಪಿ.ಆರ್. 715

**ವಿಷಯ:** ಶ್ರೀ ಆರ್. ರಾಜಣ್ಣ, ಹಿರಿಯ ಸಹಾಯಕರು, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಇವರನ್ನು ಅಮಾನತ್ತಿನಲ್ಲಿಡುವ ಬಗ್ಗೆ.

**ಓದಲಾಗಿದೆ:** 1. ಶ್ರೀ ಆರ್. ರಾಜಣ್ಣ, ಹಿರಿಯ ಸಹಾಯಕರು, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಇವರ ರಜಾ ಅರ್ಜಿ ದಿನಾಂಕ:2.5.2005.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಶ್ರೀ ಆರ್. ರಾಜಣ್ಣ, ಹಿರಿಯ ಸಹಾಯಕರು, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಇವರು ರಜಾ ಅರ್ಜಿ ಸಲ್ಲಿಸಿ ದಿನಾಂಕ:15.4.2005ರಿಂದ 30.4.2005ರ ವರೆಗೆ 16 ದಿನಗಳ ಕಾಲ ಕೌಟುಂಬಿಕ ಕಾರಣಕ್ಕಾಗಿ ಪರಿವರ್ತಿತ ರಜೆಯನ್ನು ಮತ್ತು ದಿನಾಂಕ:1.5.2005ರಿಂದ 30.5.2005ರವರೆಗೆ 30 ದಿನಗಳ ಕಾಲ ಮುಂದುವರೆದ ಪರಿವರ್ತಿತ ರಜೆಯನ್ನು ವೈದ್ಯಕೀಯ ಕಾರಣಗಳಿಗಾಗಿ ಮಂಜೂರು ಮಾಡುವಂತೆ ಕೋರಿರುತ್ತಾರೆ.

ಈ ನೌಕರರು ಪೂರ್ವಾನುಮತಿ ಪಡೆಯದೆ ದೀರ್ಘಕಾಲದ ರಜೆಯ ಮೇಲೆ ತೆರಳಿರುವುದರಿಂದ ಕಛೇರಿಯ ಕೆಲಸಗಳಿಗೆ ತುಂಬಾ ಅಡಚಣೆಯಾಗಿದ್ದು ಸಾರ್ವಜನಿಕ ಹಿತದೃಷ್ಟಿಯಿಂದ ರಜೆಯನ್ನು ಶಿಫಾರಸ್ಸು ಮಾಡಲು ಪರಿಗಣಿಸಿಲ್ಲವೆಂದು ತಿಳಿಸಿ ಕೂಡಲೇ ಕರ್ತವ್ಯಕ್ಕೆ ಹಾಜರಾಗಲು ದಿನಾಂಕ:18.5.2005ರಂದು ರೀಕಾಲ್‌ಮೆಮೋ ನೀಡಲಾಗಿತ್ತು. ತಪ್ಪಿದಲ್ಲಿ ಅನಧಿಕೃತ ಗೈರು ಹಾಜರಿ ಎಂದು ಪರಿಗಣಿಸಿ ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ, ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11ರನ್ವಯ ಶಿಸ್ತುಕ್ರಮ ಜರುಗಿಸಲಾಗುವುದೆಂದು ಸಹ ತಿಳಿಸಲಾಗಿತ್ತು.

ಪೂರ್ವಾನುಮತಿ ಪಡೆಯದೆ ಕೆಲಸಕ್ಕೆ ಅನಧಿಕೃತ ಗೈರು ಹಾಜರಾಗಿರುವ ಈ ದುರ್ನಡತೆಯಿಂದ ಕಛೇರಿಯ ಕೆಲಸಕ್ಕೆ ತೊಂದರೆಯಾಗಿರುತ್ತದೆ. ಆದ್ದರಿಂದ ಇವರನ್ನು ಅಮಾನತ್ತುಗೊಳಿಸಲು ಸರ್ಕಾರ ನಿರ್ಧರಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆನಾಸ 82 ಇಭತ 2005, ಬೆಂಗಳೂರು, ದಿನಾಂಕ: 23ನೇ ಮೇ 2005**

ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ, ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 10(1)(ಎ)ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಆರ್. ರಾಜಣ್ಣ, ಹಿರಿಯ ಸಹಾಯಕರು, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಬೆಂಗಳೂರು ಇವರನ್ನು ಇಲಾಖಾ ವಿಚಾರಣೆ/ಶಿಸ್ತುಕ್ರಮವನ್ನು ಬಾಕಿಯಿರಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಅಮಾನತ್ತಿನಲ್ಲಿರಿಸಲಾಗಿದೆ.

ಈ ನೌಕರರ ಅಮಾನತ್ತಿನ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98ರನ್ವಯ ಜೀವನಾಧಾರಭತ್ಯೆ ಪಡೆಯಲು ಅರ್ಹರಾಗಿರುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಸದರಿ ನೌಕರರು ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿಯಿಲ್ಲದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶಿವನಂಜಯ್ಯ**

ಸರ್ಕಾರದ ಅಪರ ಕಾರ್ಯದರ್ಶಿ,

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

ಪಿ.ಆರ್. 716

**ಕಂದಾಯ ಸಚಿವಾಲಯ**

**ವಿಷಯ:** 2004-05ನೇ ಸಾಲಿನಲ್ಲಿ ರಾಜ್ಯದಲ್ಲಿರುವ ಕೆಲವೊಂದು ತಾಲ್ಲೂಕುಗಳಲ್ಲಿ ಮುಂಗಾರು ಮಳೆಯು ವಿಫಲವಾಗಿರುವುದರಿಂದ ತಾಲ್ಲೂಕುಗಳನ್ನು **ಬರಪೀಡಿತ ಪ್ರದೇಶ** ಎಂಬುದಾಗಿ ಘೋಷಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ.ಆರ್‌ಡಿ 65 ಟಿಎಸ್‌ವೈ 2004 ದಿ:24.8.04.
2. ಸರ್ಕಾರದ ಆದೇಶ ಸಂಖ್ಯೆ.ಆರ್‌ಡಿ 65 ಟಿಎಸ್‌ವೈ 2004 ದಿ:30.9.04.
3. ಸರ್ಕಾರದ ಆದೇಶ ಸಂಖ್ಯೆ.ಆರ್‌ಡಿ 65 ಟಿಎಸ್‌ವೈ 2004 ದಿ:6.12.04.

**ಪ್ರಸ್ತಾವನೆ:**

ರಾಜ್ಯದಲ್ಲಿ ಸತತ ಮೂರು ವರ್ಷಗಳಿಂದ ಬರಪರಿಸ್ಥಿತಿ ಇದೆ. 2001-2002ನೇ ಸಾಲಿನಲ್ಲಿ ಬರ ಪರಿಸ್ಥಿತಿ ಇದ್ದ ಪ್ರಯುಕ್ತ ರಾಜ್ಯದ 154 ತಾಲ್ಲೂಕುಗಳನ್ನು, 2002-2003ನೇ ಸಾಲಿನಲ್ಲಿ 159 ತಾಲ್ಲೂಕುಗಳನ್ನು, 2003-2004ರಲ್ಲಿ 162 ತಾಲ್ಲೂಕುಗಳನ್ನು ಬರಪೀಡಿತ ಪ್ರದೇಶವೆಂದು ಘೋಷಿಸಲಾಗಿತ್ತು. 2004-05ನೇ ಸಾಲಿನಲ್ಲಿ ಮೇಲೆ ಓದಲಾದ ಸರ್ಕಾರಿ ಆದೇಶಗಳ ಪ್ರಕಾರ 80 ತಾಲ್ಲೂಕುಗಳನ್ನು **ಬರಪೀಡಿತ ಪ್ರದೇಶ** ಎಂದು ಘೋಷಿಸಲಾಗಿದೆ.

ರಾಜ್ಯದಲ್ಲಿ ಪ್ರಸ್ತುತ ಸಾಲಿನಲ್ಲಿ ಹಿಂಗಾರು ಮಳೆಯು ಕುಂಠಿತವಾಗಿದ್ದು, ಕೆಲವು ಜಿಲ್ಲೆಯ ತಾಲ್ಲೂಕುಗಳಲ್ಲಿ ಮಳೆಯ ಕೊರತೆ ಇದ್ದು, ಈ ಪ್ರದೇಶದಲ್ಲಿ ಹಿಂಗಾರು ಹಂಗಾಮಿನ ಬಿತ್ತನೆ ಪ್ರದೇಶದಲ್ಲಿ ಹೆಚ್ಚು ಪ್ರದೇಶವು ಒಣಹವೆಯಿಂದ ಮಳೆಯ ಕೊರತೆಯಿಂದ ಕುಂಠಿತವಾಗಿದೆ. ಇದರಿಂದಾಗಿ ಬಿತ್ತಿದ ಬೆಳೆಯು ಪೀಡಿತವಾಗಿದೆ.

ರಾಜ್ಯದಲ್ಲಿನ ಕೆಲವು ತಾಲ್ಲೂಕುಗಳಲ್ಲಿ ಮಳೆಯ ಕೊರತೆ, ಕೃಷಿ ಚಟುವಟಿಕೆಗಳು ಕುಂಠಿತವಾಗಿರುವ ಬಗ್ಗೆ ಸಮೀಕ್ಷಿಸಲಾಗಿದೆ. ಈ ತಾಲ್ಲೂಕುಗಳಲ್ಲಿ ಮಳೆಯ ಕೊರತೆ, ಬಿತ್ತನೆಯಾಗಿರುವ ಪ್ರದೇಶದ ಹೆಚ್ಚು ಭಾಗ ಬರಪೀಡಿತವಾಗಿದ್ದು, ಅಂತರ ಜಲಮಟ್ಟವು ಕುಸಿದಿದ್ದು ಸತತ 3 ವರ್ಷಗಳ ಬರಗಾಲದಿಂದ ಪೀಡಿತವಾಗಿರುವ ಈ ಪ್ರದೇಶಗಳು ಈಗ ಪುನಃ ಬರಗಾಲದ ಪರಿಸ್ಥಿತಿಗೆ ಒಳಗಾಗಿದೆ. ಏಪ್ರಿಲ್-ಮೇ ತಿಂಗಳುಗಳಲ್ಲಿ ಕುಡಿಯುವ ನೀರಿನ ಸಮಸ್ಯೆ ತೀವ್ರತರವಾಗಿರುವುದರಿಂದ ಈ ತಾಲ್ಲೂಕುಗಳನ್ನು ಬರಪೀಡಿತವೆಂದು ಘೋಷಿಸಲು ಬೇಡಿಕೆಗಳು ಬಂದಿರುತ್ತವೆ. ದಿನಾಂಕ: 24.3.2005ರಂದು ನಡೆದ ಸಚಿವ ಸಂಪುಟ ಉಪಸಮಿತಿಯಲ್ಲಿ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ಬರಪೀಡಿತ ಪ್ರದೇಶವೆಂದು ಘೋಷಿಸಲು ಮಾರ್ಗಸೂಚಿ ತಯಾರಿಸಲು ಸೂಚಿಸಿದ್ದು, ಅದರಂತೆ ದಿನಾಂಕ: 26.3.2005ರಂದು ಅಪರ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ಸಭೆ ನಡೆದು ಇದರ ಬಗ್ಗೆ ಮಾರ್ಗಸೂಚಿಗಳನ್ನು ತಯಾರಿಸಿ ವರದಿ ಸಲ್ಲಿಸಿದೆ. ಈ ಮಾರ್ಗಸೂಚಿಗಳ ಹಿನ್ನೆಲೆಯಲ್ಲಿ ಇನ್ನೂ ಕೆಲವೊಂದು ತಾಲ್ಲೂಕುಗಳನ್ನು ಬರಪೀಡಿತವೆಂದು ಘೋಷಿಸಲು ಸಮಿತಿಯು ಶಿಫಾರಸ್ಸು ಮಾಡಿರುತ್ತದೆ. ಈ ಹಿನ್ನೆಲೆಯಲ್ಲಿ 35 ತಾಲ್ಲೂಕುಗಳನ್ನು ಬರಪೀಡಿತವೆಂದು ಘೋಷಿಸಲು ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 277 ಟಿಎನ್‌ಆರ್ 2005, ಬೆಂಗಳೂರು, ದಿನಾಂಕ: 12ನೇ ಮೇ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಅನುಬಂಧ-1ರಲ್ಲಿ ನಮೂದಿಸಿರುವ ರಾಜ್ಯದಲ್ಲಿನ 16 ಜಿಲ್ಲೆಗಳ 35 ತಾಲ್ಲೂಕುಗಳನ್ನು ಬರ ಪರಿಹಾರ ಕಾಮಗಾರಿಗಳನ್ನು ಹಮ್ಮಿಕ್ಕೊಳ್ಳುವ ಉದ್ದೇಶಕ್ಕಾಗಿ 2004-05ನೇ ಸಾಲಿಗೆ ನೀರಾವರಿ ಪ್ರದೇಶವನ್ನು ಹೊರತುಪಡಿಸಿ **ಬರಪೀಡಿತ ಪ್ರದೇಶಗಳೆಂದು** ತಕ್ಷಣದಿಂದ ಜಾರಿಗೆ ಬರುವಂತೆ ಘೋಷಿಸಲಾಗಿದೆ.

ಎಲ್ಲಾ ಇಲಾಖೆಗಳು ಬರಪೀಡಿತ ಪ್ರದೇಶವೆಂದು ಘೋಷಿಸಿರುವ ಈ ತಾಲ್ಲೂಕುಗಳಲ್ಲಿ ಗರಿಷ್ಠ ಮಟ್ಟದಲ್ಲಿ ಉದ್ಯೋಗಸೃಜನೆ ಕಾಮಗಾರಿಗಳು, ಕುಡಿಯುವ ನೀರಿನ ವ್ಯವಸ್ಥೆ ಜಾನುವಾರುಗಳ ಸಂರಕ್ಷಣೆ ಇತ್ಯಾದಿ ಕೆಲಸ ಕಾರ್ಯಗಳನ್ನು ಕೈಗೆತ್ತಿಕೊಂಡು ರಾಜ್ಯ ಹಾಗೂ ಕೇಂದ್ರ ಸರ್ಕಾರವು ಹಮ್ಮಿಕ್ಕೊಳ್ಳುವ ಎಲ್ಲಾ ಯೋಜನೆಗಳನ್ನು ಅನುಷ್ಠಾನಗೊಳಿಸುವಲ್ಲಿ ಸೂಕ್ತ ಕ್ರಮ ಕೈಗೊಳ್ಳುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ದೇಸಾಯಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಪರಿಹಾರ ಮತ್ತು ಸೇವೆಗಳು-2).

**ಅನುಬಂಧ-1**

**ಬರಪೀಡಿತ ಪ್ರದೇಶವೆಂದು ಘೋಷಿಸಲಾಗಿರುವ ತಾಲ್ಲೂಕುಗಳ ಪಟ್ಟಿ ದಿನಾಂಕ: 7ನೇ ಮೇ 2005**

| ಜಿಲ್ಲೆ | ತಾಲ್ಲೂಕು |
|---|---|
| 1. ಬೆಂಗಳೂರು (ಗ್ರಾ) | 1. ದೊಡ್ಡಬಳ್ಳಾಪುರ |
| | 2. ಮಾಗಡಿ |
| 2. ಕೋಲಾರ | 3. ಬಂಗಾರಪೇಟೆ |
| | 4. ಚಿಂತಾಮಣಿ |
| | 5. ಗುಡಿಬಂಡೆ |
| | 6. ಮುಳಬಾಗಿಲು |
| | 7. ಶಿಡ್ಲಘಟ್ಟ |
| 3. ತುಮಕೂರು | 8. ಚಿಕ್ಕನಾಯಕನಹಳ್ಳಿ |
| | 9. ಕೊರಟಗೆರೆ |
| | 10. ಮಧುಗಿರಿ |
| 4. ಚಿತ್ರದುರ್ಗ | 11. ಹೊಳಲ್ಕೆರೆ |
| 5. ದಾವಣಗೆರೆ | 12. ಹರಪನಹಳ್ಳಿ |
| | 13. ಚನ್ನಗಿರಿ |
| 6. ಮೈಸೂರು | 14. ಮೈಸೂರು |
| 7. ಬಳ್ಳಾರಿ | 15. ಸಂಡೂರು |
| | 16. ಕೂಡ್ಲಿಗಿ |
| 8. ಕೊಪ್ಪಳ | 17. ಕೊಪ್ಪಳ |
| 9. ಬಾಗಲಕೋಟೆ | 18. ಮುಧೋಳ |
| 10. ಶಿವಮೊಗ್ಗ | 19. ಭದ್ರಾವತಿ |
| | 20. ಸಾಗರ |
| | 21. ಶಿಕಾರಿಪುರ |
| | 22. ಶಿವಮೊಗ್ಗ |
| | 23. ಸೊರಬ |
| 11. ಹಾಸನ | 24. ಆಲೂರು |
| | 25. ಅರಕಲಗೂಡು |
| | 26. ಬೇಲೂರು |
| 12. ಚಿಕ್ಕಮಗಳೂರು | 27. ಚಿಕ್ಕಮಗಳೂರು |
| | 28. ಎನ್.ಆರ್. ಪುರ |
| 13. ಕೊಡಗು | 29. ವೀರಾಜಪೇಟೆ |
| 14. ಉತ್ತರ ಕನ್ನಡ | 30. ಹಳಿಯಾಳ |
| | 31. ಮುಂಡಗೋಡ |
| | 32. ಶಿರಸಿ |
| | 33. ಯಲ್ಲಾಪುರ |
| 15. ರಾಯಚೂರು | 34. ಸಿಂಧನೂರು |
| 16. ಬೆಳಗಾಂ | 35. ಅಥಣಿ |

**ಎಂ.ಎಸ್. ದೇಸಾಯಿ**

ಪಿ.ಆರ್. 717

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಪರಿಹಾರ ಮತ್ತು ಸೇವೆಗಳು-2).

**ಕಾರ್ಮಿಕ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಕಾಇ 15 ಕಾಬಾನಿ 2005, ಬೆಂಗಳೂರು, ದಿನಾಂಕ: 10ನೇ ಮೇ 2005**

ಮೆ: ಕೃಷ್ಣಾ ಸ್ಪಿನ್ನರ್, ಗೋಕುಲ್ ರಸ್ತೆ, ಹುಬ್ಬಳ್ಳಿ, ಕಾರ್ಖಾನೆಯಲ್ಲಿ ಸುಮಾರು 120 ಮಹಿಳಾ ಕಾರ್ಮಿಕರು ಕೆಲಸ ನಿರ್ವಹಿಸುತ್ತಿದ್ದು, ಅವರಲ್ಲಿ ಹಲವು ಮಂದಿ ಕಾರ್ಮಿಕರು 2ನೇ ಪಾಳಿಯಲ್ಲಿ ಸಂಜೆ 7-00 ಗಂಟೆಯ ನಂತರ 10-00 ಗಂಟೆಯವರೆಗೆ ಕೆಲಸ ಮಾಡಲು ಒಪ್ಪಿರುವ ಕಾರಣ 50 ಮಂದಿ ಮಹಿಳಾ ನೌಕರರು 2ನೇ ಪಾಳಿಯಲ್ಲಿ ಈ ಕೆಳಕಂಡ ಷರತ್ತುಗೊಳಪಟ್ಟು ಕಾರ್ಯ ನಿರ್ವಹಿಸಲು ಕರ್ನಾಟಕ ಸರ್ಕಾರವು ಕರ್ನಾಟಕ ಕಾರ್ಖಾನೆಗಳ ಅಧಿನಿಯಮದ ಸೆಕ್ಷನ್ 66 (1) (ಬಿ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅನುಮತಿ ನೀಡಿದೆ.

1) ಆಡಳಿತವರ್ಗದವರ ಅರ್ಜಿ ಕೂಡ ಲಗತ್ತಿಸಲಾಗಿರುವ ಮಹಿಳಾ ಕಾರ್ಮಿಕರನ್ನು ಹೊರತುಪಡಿಸಿ ಮತ್ತಾವುದೇ ಮಹಿಳಾ ಕಾರ್ಮಿಕರು 2ನೇ ಪಾಳಿಯಲ್ಲಿ ಕೆಲಸ ನಿರ್ವಹಿಸಲು ಇಚ್ಛಿಸಿದ ಪಕ್ಷದಲ್ಲಿ ಅಂತಹ ಮಹಿಳಾ ಕಾರ್ಮಿಕರಿಂದ ಲಿಖಿತ ಅನುಮತಿ ಪಡೆಯುವುದು.
2) ಮಹಿಳಾ ಕಾರ್ಮಿಕರಿಂದ ಯಾವುದೇ ಸಂದರ್ಭದಲ್ಲಿ ಹೆಚ್ಚುವರಿ ಕೆಲಸ ನಿರ್ವಹಿಸಬಾರದು, ಇದು ವಿನಾಯಿತಿ ನೀಡಲಾದ ಮಹಿಳಾ ಕಾರ್ಮಿಕರಿಗೂ ಸಹ ಅನ್ವಯಿಸುತ್ತದೆ.
3) ಯಾವುದೇ ಸಂದರ್ಭದಲ್ಲಿ ಸಾಯಂಕಾಲ 7-00 ಗಂಟೆಯ ನಂತರ ಕೆಲಸ ನಿರ್ವಹಿಸುವ ಮಹಿಳಾ ಕಾರ್ಮಿಕರು ಕೆಲಸಕ್ಕೆ ಹಾಜರಾಗುವ ಮುನ್ನ ಹಾಗೂ ನಂತರ ಕೊನೆ ಪಕ್ಷ 9-00 ಗಂಟೆ ಕಾಲ ವಿಶ್ರಾಂತಿ ದೊರೆಯುವಂತೆ ನೋಡಿಕೊಳ್ಳುವುದು.
4) ರಾತ್ರಿ 10-00 ಗಂಟೆಯವರೆಗೆ ಕೆಲಸ ನಿರ್ವಹಿಸುವ ಮಹಿಳಾ ಕಾರ್ಮಿಕರನ್ನು ಅವರವರ ಮನೆಗಳಿಗೆ ತಲುಪಿಸಲು ವಾಹನ ಸೌಕರ್ಯವನ್ನು ಒದಗಿಸುವುದು.
5) ವಿನಾಯಿತಿ ಅವಧಿಯಲ್ಲಿ ಕೆಲಸ ಮಾಡುವ ಮಹಿಳಾ ಕಾರ್ಮಿಕರಿಗೆ ಶಿಶು ಸಂರಕ್ಷಣೆ ಸೌಲಭ್ಯವನ್ನು ಅವರು ಕೆಲಸ ನಿರ್ವಹಿಸುವವರೆಗೆ ಒದಗಿಸುವುದು.
6) ಮಹಿಳಾ ಕಾರ್ಮಿಕರು ಲೈಂಗಿಕ ಕಿರುಕುಳಕ್ಕೆ ಒಳಗಾಗದಂತೆ ಮುಂಜಾಗ್ರತಾ ಮತ್ತು ಸುರಕ್ಷತಾ ಕ್ರಮ ಕುರಿತು ನಿಗಾ ವಹಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿಮಲಾಕುಮಾರಿ**

ಪಿ.ಆರ್. 718

ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ, (ಕಾರ್ಖಾನೆ ಮತ್ತು ಬಾಯ್ಲರುಗಳು)

**ಶಿಕ್ಷಣ ಸಚಿವಾಲಯ**

**ವಿಷಯ:** ಕರ್ನಾಟಕ ರಾಜ್ಯದಲ್ಲಿ 5ನೇ ಆರ್ಥಿಕ ಗಣತಿಯಲ್ಲಿ ಭಾಗವಹಿಸುವ ಶಿಕ್ಷಕರಿಗೆ ರಜಾ ಸೌಲಭ್ಯ ನೀಡುವ ಬಗ್ಗೆ.

**ಓದಲಾಗಿದೆ:** ಅಪರ ಮುಖ್ಯ ಕಾರ್ಯದರ್ಶಿಗಳು ಹಾಗೂ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಯೋಜನಾ ಮತ್ತು ಸಾಂಖ್ಯಿಕ ಇಲಾಖೆ ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ DES/6/ECS/2004/945, ದಿನಾಂಕ 28.1.2005.

**ಪ್ರಸ್ತಾವನೆ:**

ರಾಜ್ಯದಲ್ಲಿ 5ನೇ ಆರ್ಥಿಕ ಗಣತಿ ಕಾರ್ಯವು ಸುಗಮವಾಗಿ ನಡೆಸಲು ಗಣತಿ ಕಾರ್ಯ ನಿರ್ವಹಣೆ ಮತ್ತು ಮೇಲ್ವಿಚಾರಣೆ ಕಾರ್ಯಕ್ಕೆ ಶಿಕ್ಷಕರುಗಳ ಸೇವೆಯನ್ನು ಪಡೆಯಲು ದಿನಾಂಕ: 24.1.2005 ರಂದು ನಡೆದ State Level Steering Committee ಸಭೆಯಲ್ಲಿ ಶಿಕ್ಷಣ ಇಲಾಖೆಯು ಸಹಮತಿಸಿರುವುದನ್ನು ಅಭಿನಂದಿಸುತ್ತಾ, ಈ ಕಾರ್ಯಕ್ರಮದಲ್ಲಿ ಭಾಗವಹಿಸುವ ಶಿಕ್ಷಕರಿಗೆ ರಜಾ ಸೌಲಭ್ಯ ನೀಡುವ ಸಂಬಂಧವಾಗಿ ಸರ್ಕಾರಿ ಆದೇಶ ಹೊರಡಿಸುವಂತೆ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು ಮತ್ತು ಪ್ರಧಾನ ಕಾರ್ಯದರ್ಶಿಗಳು ಯೋಜನಾ ಇಲಾಖೆ ಬೆಂಗಳೂರು ಇವರು ಮೇಲೆ ಓದಲಾದ ದಿನಾಂಕ:28.1.2005ರ ಪತ್ರದಲ್ಲಿ ಶಿಫಾರಸ್ಸು ಮಾಡಿ ಪ್ರಸ್ತಾವನೆ ಸಲ್ಲಿಸಿರುವರು.

ಈ ಪ್ರಸ್ತಾವನೆಯನ್ನು ಪರಿಶೀಲಿಸಿ 5ನೇ ಆರ್ಥಿಕ ಗಣತಿಯು ಅತ್ಯಂತ ಪ್ರಮುಖವಾದ ಕಾರ್ಯವಾಗಿರುವುದರಿಂದ ಮತ್ತು ಆರ್ಥಿಕ ಗಣತಿಯ ಮಾಹಿತಿಯು ಸರ್ಕಾರಕ್ಕೆ ಹಾಗೂ ಸಾರ್ವಜನಿಕರಿಗೆ ತುಂಬಾ ಉಪಯುಕ್ತತೆಯಾಗಿರುವುದರಿಂದ ಹಾಗೂ ಈ ಗಣತಿ ಕಾರ್ಯವು ಶಾಲೆಗಳಿಗೆ ರಜೆ ಇರುವ ಸಂದರ್ಭದಲ್ಲಿ ನಡೆಸುತ್ತಿರುವ ಪ್ರಯುಕ್ತ ಈ ಗಣತಿ ಕಾರ್ಯಕ್ಕೆ ಭಾಗವಹಿಸುವ ಶಿಕ್ಷಕರಿಗೆ ಗಳಿಕೆ ರಜೆಯನ್ನು ಮಂಜೂರು ಮಾಡಲು ತೀರ್ಮಾನಿಸಿದೆ, ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ ಇಡಿ 29 ಎಸ್‌ಟಿಬಿ 2005, ಬೆಂಗಳೂರು, ದಿನಾಂಕ: 23ನೇ ಮೇ 2005**

ಮೇಲೆ ತಿಳಿಸಿರುವ ಅಂಶಗಳ ಹಿನ್ನೆಲೆಯಲ್ಲಿ 5ನೇ ಆರ್ಥಿಕ ಗಣತಿಯಲ್ಲಿ ಭಾಗವಹಿಸಿದ ಶಿಕ್ಷಕರಿಗೆ 10 ದಿವಸಗಳ ಗಳಿಕೆ ರಜೆಯನ್ನು ಅವರ ಲೆಕ್ಕಕ್ಕೆ ನೀಡಲು ಸರ್ಕಾರವು ಈ ಮಂಜೂರಾತಿ ನೀಡಿ ಆದೇಶಿಸಿದೆ.

ಇದನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ 358 ವೆಚ್ಚ-8/2005, ದಿನಾಂಕ: 13.5.2005ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 719

**ಎಸ್.ಎಂ. ನಂದಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ, (ಸಾಮಾನ್ಯ)

**ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ**

**ವಿಷಯ:** ರಾಜ್ಯದಲ್ಲಿರುವ ಕಾಗದ ಮತ್ತು ರೆಯಾನ್ ಕಾರ್ಖಾನೆಗಳಿಗೆ ಅಗತ್ಯವಿಲ್ಲದ ಪಲ್ಪ್‌ವುಡ್‌ನ್ನು ಹೊರರಾಜ್ಯಗಳಿಗೆ ರಫ್ತು ಮಾಡಲು ಸರ್ಕಾರದ ಅನುಮತಿ ಬಗ್ಗೆ.

**ಉಲ್ಲೇಖ:** ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕೆ ನಿಗಮ ನಿ., ಇವರ ಅ.ಸ. ಪತ್ರ ಸಂ. ಟಿಇಸಿ.1.ಸಿಆರ್.5/2003-04, ದಿ: 25.2.2005 ಮತ್ತು 21.3.2005 ರ ಪತ್ರಗಳು.

**ಪ್ರಸ್ತಾವನೆ:**

ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ನಿಯಮಿತ, ಇವರ ಅರೆ ಸರ್ಕಾರಿ ಪತ್ರ ಸಂ. ಟಿಇಸಿ.1 ಸಿಆರ್.5/2003-04 ದಿ: 25.2.2005 ಮತ್ತು 21.3.2005ರ ಪತ್ರಗಳಲ್ಲಿ ಸರ್ಕಾರಕ್ಕೆ ಪತ್ರಗಳನ್ನು ಬರೆದು ರಾಜ್ಯದಲ್ಲಿ ಕಾಗದ ಮತ್ತು ರೆಯಾನ್

ಕಾರ್ಖಾನೆಗಳಿಗೆ ಅಗತ್ಯವಿಲ್ಲದ ಪಲ್ಪ್‌ವುಡ್‌ನ್ನು ಹೊರರಾಜ್ಯಗಳಿಗೆ ರಫ್ತು ಮಾಡಲು ಸರ್ಕಾರಕ್ಕೆ ಪತ್ರ ಬರೆದು ಕೋರಿದ್ದು, ಈ ಬಗ್ಗೆ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯವರೊಂದಿಗೆ ದಿನಾಂಕ: 19.3.2005 ರಂದು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕೆ ನಿಗಮ ನಿಯಮಿತ, ಇವರು ಚರ್ಚಿಸಿದಂತೆ ಹಾಗೂ ಸದರಿ ಸಭೆಯಲ್ಲಿ ಚರ್ಚಿಸಿ ನಿರ್ಣಯಿಸಿದಂತೆ, ರಾಜ್ಯದ ಕಾಗದ ಮತ್ತು ರೆಯಾನ್ ಕಾರ್ಖಾನೆಗಳಿಗೆ ಅಗತ್ಯವಿಲ್ಲದ ಪಲ್ಪ್‌ವುಡ್‌ನ್ನು ಹೊರ ರಾಜ್ಯಗಳಿಗೆ ರಫ್ತು ಮಾಡಲು ಸರ್ಕಾರವು ತನ್ನ ಅನುಮತಿ ನೀಡಲು ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 77 ಎಫ್‌ಡಿಪಿ 2005, ಬೆಂಗಳೂರು, ದಿನಾಂಕ: 6ನೇ ಮೇ 2005**

ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕೆ ಅಭಿವೃದ್ಧಿ ನಿಗಮ ನಿಯಮಿತ, ಇವರು ತಮ್ಮ ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ರಾಜ್ಯದ ಕಾಗದ ಮತ್ತು ರೆಯಾನ್ ಕಾರ್ಖಾನೆಗಳಿಗೆ ಅಗತ್ಯವಿಲ್ಲದ ಪಲ್ಪ್‌ವುಡ್‌ನ್ನು ರಾಜ್ಯದ ಹೊರಗಿನ ಪಲ್ಪ್‌ವುಡ್ ಆಧಾರಿತ ಕೈಗಾರಿಕೆಗಳಿಗೆ 2005-06ನೇ ಸಾಲಿಗೆ ಸರಬರಾಜು ಮಾಡಲು ಸರ್ಕಾರವು ಈ ಕೆಳಕಂಡ ಷರತ್ತುಗಳೊಂದಿಗೆ ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮಕ್ಕೆ ಅನುಮತಿ ನೀಡಿದೆ.

1) ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ನಿಯಮಿತಕ್ಕೆ ಕಟಾವಿಗಾಗಿ ಅದಕ್ಕೆ ಹಂಚಿಕೆ ಮಾಡಲಾದ ಯಾವುದೇ ನೆಡುತೋಪುಗಳಿಂದ ಮಾತ್ರ ಪಲ್ಪ್‌ವುಡ್‌ನ್ನು ಹೊರ ರಾಜ್ಯಗಳಿಗೆ ರಫ್ತು ಮಾಡುವುದು.
2) ಮೈಸೂರು ಪೇಪರ್ ಮಿಲ್ಸ್ ಇವರಿಗೆ ಅಗತ್ಯವಾದಷ್ಟು ಪಲ್ಪ್‌ವುಡ್‌ನ್ನು ನಿಯಮಿತವಾಗಿ ಪೂರ್ಣ ಪ್ರಮಾಣದಲ್ಲಿ ಸರಬರಾಜು ಮಾಡುವುದು.
3) ಹೊರರಾಜ್ಯದ ಕೈಗಾರಿಕೆಗಳಿಗೆ ಪಲ್ಪ್‌ವುಡ್‌ನ್ನು ರಫ್ತು ಮಾಡುವಾಗ ಪಲ್ಪ್‌ವುಡ್ ಸಾಮಗ್ರಿಯ ಗಾತ್ರದ ಮಿತಿ, ಮರದ ವಯೋಮಿತಿಯನ್ನು ನಿಗದಿಪಡಿಸುವುದು ಸೂಕ್ತವಲ್ಲ.
4) ಕಾರ್ಯಯೋಜನೆಯಿಂದ ಅನುಮತಿ ಪಡೆದ ವಯಸ್ಸಿಗೆ ಬಂದಂತಹ ಯಾವುದೇ ನೆಡುತೋಪಿನಿಂದ ಪಲ್ಪ್‌ವುಡ್‌ನ್ನು ರಫ್ತು ಮಾಡಬಹುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ವಿ. ಜಯಲಕ್ಷ್ಮಿ**

ಪಿ.ಆರ್. 720

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

**ಶಿಕ್ಷಣ ಸಚಿವಾಲಯ**

**ವಿಷಯ:** ಸರ್ಕಾರಿ ಹಾಗೂ ಅನುದಾನಿತ ಪದವಿ ಕಾಲೇಜುಗಳಲ್ಲಿನ ಶುಲ್ಕ ವಿನ್ಯಾಸವನ್ನು ಪರಿಷ್ಕರಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಇಡಿ 123 ಯುಜಿಸಿ 97 ದಿನಾಂಕ: 07.08.2000.
2. ಸರ್ಕಾರಿ ಆದೇಶ ಸಂಖ್ಯೆ: ಇಡಿ 123 ಯುಜಿಸಿ 97 ದಿನಾಂಕ: 01.04.2002.
3. ಕಾಲೇಜು ಶಿಕ್ಷಣ ಆಯುಕ್ತರ ಪತ್ರ ಸಂಖ್ಯೆ:ಕಾಶಿಆ-ಶೈವಿ: 212/ಶುಲ್ಕ/2004-05 ದಿನಾಂಕ: 21-03-2005 ಮತ್ತು 04-05-2005

**ಪ್ರಸ್ತಾವನೆ:**

ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ದಿನಾಂಕ: 7.8.2000ರ ಸರ್ಕಾರಿ ಆದೇಶದಲ್ಲಿ ರಾಜ್ಯದಲ್ಲಿನ ಎಲ್ಲಾ ಸರ್ಕಾರಿ / ಅನುದಾನಿತ ಪ್ರಥಮ ದರ್ಜೆ ಹಾಗೂ ಸಂಯುಕ್ತ ಪದವಿ ಕೋರ್ಸುಗಳ ಪ್ರವೇಶ ಪಾಠ ಪ್ರವಚನ ಹಾಗೂ ಇತರೆ ಶುಲ್ಕಗಳನ್ನು ಸದರಿ ಆದೇಶದ ಅನುಬಂಧದಲ್ಲಿರುವಂತೆ 2000-01ನೇ ಶೈಕ್ಷಣಿಕ ಸಾಲಿನಿಂದ ಜಾರಿಗೆ ಬರುವಂತೆ ಪರಿಷ್ಕರಿಸಿ, ಮುಂಬರುವ 5 ವರ್ಷಗಳಲ್ಲಿ ಶುಲ್ಕವನ್ನು ಶೇಕಡ 10ರಷ್ಟು ವರ್ಷಂಪ್ರತಿ ಹೆಚ್ಚಿಸಲು ಆದೇಶಿಸಲಾಗಿದೆ.

ಮೇಲೆ ಕ್ರಮಾಂಕ (2)ರಲ್ಲಿ ಓದಲಾದ ದಿನಾಂಕ: 1.4.2002ರ ಆದೇಶದಲ್ಲಿ ಬೋಧನಾ ಶುಲ್ಕವನ್ನು ರೂ.500-00 ಬದಲಾಗಿ ರೂ.400-00ಕ್ಕೂ ಹಾಗೂ ಪ್ರಯೋಗಾಲಯದ ಶುಲ್ಕವನ್ನು ರೂ.160-00 ಬದಲಾಗಿ ರೂ.110-00ಕ್ಕೂ ಪುನರ್ ಪರಿಷ್ಕರಿಸಿ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಆದೇಶಿಸಿ, ಇನ್ನಿತರೆ ಶುಲ್ಕಗಳನ್ನು ಯಥಾಸ್ಥಿತಿಯಲ್ಲೇ ಮುಂದುವರೆಸಲು ಆದೇಶಿಸಲಾಗಿತ್ತು. ಉಲ್ಲೇಖಿತ ದಿನಾಂಕ: 07.08.2000 ಮತ್ತು ದಿನಾಂಕ: 01.04.2002ರ ಆದೇಶಗಳ ಅವಧಿ 2004-05ನೇ ಸಾಲಿಗೆ ಮುಕ್ತಾಯವಾಗಲಿದ್ದು, 2005-06ನೇ ಸಾಲಿನ ಶೈಕ್ಷಣಿಕ ವರ್ಷವು ಪ್ರಾರಂಭವಾಗಿರುವುದರಿಂದ, ಪ್ರಸಕ್ತ ಸಾಲಿಗೆ ಶುಲ್ಕ ವಿನ್ಯಾಸವನ್ನು ಪರಿಷ್ಕರಿಸಿ ಆದೇಶ ಹೊರಡಿಸುವಂತೆ ಕೋರಿ ಮೇಲೆ ಕ್ರಮಾಂಕ (3)ರಲ್ಲಿ ಓದಲಾದ ಪತ್ರಗಳಲ್ಲಿ ಕಾಲೇಜು ಶಿಕ್ಷಣ ಆಯುಕ್ತರು ಪ್ರಸ್ತಾಪಿಸಿರುತ್ತಾರೆ. ಕಾಲೇಜು ಶಿಕ್ಷಣ ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 53 ಯುಜಿಸಿ 2005, ಬೆಂಗಳೂರು, ದಿನಾಂಕ: 16ನೇ ಮೇ 2005**

ರಾಜ್ಯದಲ್ಲಿನ ಎಲ್ಲಾ ಸರ್ಕಾರಿ / ಅನುದಾನಿತ ಪ್ರಥಮ ದರ್ಜೆ ಹಾಗೂ ಸಂಯುಕ್ತ ಪದವಿ ಕೋರ್ಸುಗಳ ಪ್ರವೇಶ ಪಾಠ ಪ್ರವಚನ ಹಾಗೂ ಇತರೆ ಶುಲ್ಕಗಳನ್ನು ಸರ್ಕಾರಿ ಆದೇಶ ಸಂಖ್ಯೆ: ಇಡಿ 123 ಯುಜಿಸಿ 97 ದಿನಾಂಕ: 07.08.2000ದ ಅನುಬಂಧದಲ್ಲಿ ನಮೂದಿಸಲಾಗಿರುವ ದರಗಳ ಮತ್ತು ಅದೇ ಸಮ ಸಂಖ್ಯೆಯ ದಿನಾಂಕ: 01.04.2002ರ ಆದೇಶದಲ್ಲಿ ಪರಿಷ್ಕರಿಸಲಾದ ಶುಲ್ಕ ವಿನ್ಯಾಸದ ಶುಲ್ಕಗಳಿಗೆ 2005-06ನೇ ಶೈಕ್ಷಣಿಕ ಸಾಲಿಗೆ ಶೇಕಡ 10ರಷ್ಟು ದರ ಹೆಚ್ಚಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮೇರಿ ಜಾಯ್ಸ್**

ಪಿ.ಆರ್. 721

ಸರ್ಕಾರದ ಉಪ ಕಾರ್ಯದರ್ಶಿ,

ಶಿಕ್ಷಣ ಇಲಾಖೆ. (ಉನ್ನತ ಶಿಕ್ಷಣ)

**FOOD, CIVIL SUPPLIES AND CONSUMER AFFAIRS SECRETARIAT**

**Sub:** Constitution of Departmental Technical Advisory Committee for procurement of Computers by the field departments under the administrative control of the Department of Food Civil supplies and Consumer Affairs-change of Technical Member-reg.

**Read:** 1. G.O.No.FCS.21. EFT.97 Bangalore dt.12.9.2000.

2. DPAR Letter No.DPAR.35 EAAE.2004 dt.28.4.2005 from the Desk Officer, E-Administration, DPAR (AR)

**Preamble:-**

By Government Order dated: 12.9.2000, read at (1) above, the Technical Advisory Committee for purchase of computers for use in the field departments under the administrative control of Food, Civil Supplies & Consumer Affairs Department is constituted.

In the DPAR (AR) letter dated 28.4.2005 read at (2) above the Desk Officer, E-Administration has requested to nominate Sri S. Ramanathan as Technical Member in place of Prof. V.B. Koujalagi, Indian Institute of Management Bangalore who is retired.

**Government Order No:FCS 75 EFT 2005, Bangalore, Dated: 7th May 2005**

In continuation of earlier G.O. No.FCS 21 FPP 97, dated 12.9.2000, Sri S. Ramanathan, Computer Information Group, INSAT Building, 5th Floor, ISRO Satellite Centre, Air Port Road, Bangalore-560 017 is nominated as Technical Member in place of Sri V.B. Koujalagi, Indian Institute of Management, Bangalore who is retired.

By Order and in the name of the Governor of Karnataka,

**A.S. VISHVESHWARAIAH**

P.R. 722

Desk Officer, Food-1 Section,

Food, Civil Supplies & Consumer Affairs Department.

**ಯೋಜನೆ ಹಾಗೂ ಸಾಂಖ್ಯಿಕ ಸಚಿವಾಲಯ**

**ವಿಷಯ:** ಕರ್ನಾಟಕ ಶಾಸಕರ ಪ್ರದೇಶಾಭಿವೃದ್ಧಿ ಯೋಜನೆಯಡಿಯಲ್ಲಿ ಮಾರ್ಗಸೂಚಿಯನ್ನು ಹೊರಡಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ: ಪಿಡಿ 486 ಪಿಎಂಎಂ 2001, ದಿನಾಂಕ:16.07.2001.

**ಪ್ರಸ್ತಾವನೆ:**

ಆದೇಶ ಸಂಖ್ಯೆ: ಪಿಡಿ 486 ಪಿಎಂಎಂ 2001, ದಿನಾಂಕ: 16.07.2001ರಲ್ಲಿ ಸರ್ಕಾರವು ಕರ್ನಾಟಕ ಶಾಸಕರ ಪ್ರದೇಶಾಭಿವೃದ್ಧಿ ಯೋಜನೆಯನ್ನು ಅನುಷ್ಠಾನಗೊಳಿಸಲು ಆದೇಶ ನೀಡಲಾಗಿತ್ತು. ಈ ಯೋಜನೆಯ ಅನುಷ್ಠಾನಕ್ಕೆ ಮಾರ್ಗಸೂಚಿಯನ್ನು ಹೊರಡಿಸಲಾಗಿತ್ತು. ಈ ಮಾರ್ಗಸೂಚಿ ಅನುಬಂಧ-1ರಲ್ಲಿ ಈ ಯೋಜನೆಯಡಿಯಲ್ಲಿ ತೆಗೆದುಕೊಳ್ಳಬಹುದಾದ ಕಾರ್ಯಕ್ರಮಗಳ ಪಟ್ಟಿಯನ್ನು ಹಾಗೂ ಅನುಬಂಧ-2ರಲ್ಲಿ ಈ ಯೋಜನೆಯಡಿಯಲ್ಲಿ ನಮೂದಿಸಿದ ಕಾರ್ಯಕ್ರಮಗಳ ಪಟ್ಟಿಯನ್ನು ಸೂಚಿಸಲಾಗಿತ್ತು. ಈಗ ಈ ಮಾರ್ಗಸೂಚಿಯನ್ನು ಪರಿಷ್ಕರಿಸಲು ಉದ್ದೇಶಿಸಲಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಯೋಇ 40 ಪಿಎಂಎಂ 2005, ಬೆಂಗಳೂರು, ದಿನಾಂಕ: 16ನೇ ಮೇ 2005**

ಕರ್ನಾಟಕ ರಾಜ್ಯ ಶಾಸಕರ ಪ್ರದೇಶಾಭಿವೃದ್ಧಿ ಯೋಜನೆಯಡಿಯಲ್ಲಿ ತೆಗೆದುಕೊಳ್ಳಬಹುದಾದ ಕಾರ್ಯಕ್ರಮಗಳ ಪಟ್ಟಿಯನ್ನು ಹಾಗೂ ಈ ಯೋಜನೆಯಡಿಯಲ್ಲಿ ನಿಷೇಧಿಸಿದ ಕಾರ್ಯಕ್ರಮಗಳ ಪಟ್ಟಿಯನ್ನು ಈ ಕೆಳಕಂಡಂತೆ ಸೂಚಿಸಲು ಸರ್ಕಾರವು ಆದೇಶ ನೀಡಿದೆ. ಜಿಲ್ಲಾಧಿಕಾರಿಗಳು ಈ ಯೋಜನೆಯನ್ನು ಅನುಷ್ಠಾನಗೊಳಿಸುವಾಗ ಇದನ್ನು ಕಟ್ಟುನಿಟ್ಟಾಗಿ ಪಾಲಿಸಲು ಆದೇಶಿಸಲಾಗಿದೆ.

[ಈ ಯೋಜನೆ ಅಡಿಯಲ್ಲಿ ತೆಗೆದುಕೊಳ್ಳಬಹುದಾದ ಕಾರ್ಯಕ್ರಮಗಳ ವಿವರ]

1) ಶಾಲೆಗಳು, ಹಾಸ್ಟೆಲ್‌ಗಳು, ಅಂಗನವಾಡಿ ಕಟ್ಟಡಗಳ ನಿರ್ಮಾಣ ಹಾಗೂ ದುರಸ್ತಿ ಹಾಗೂ ಈ ಕಟ್ಟಡಗಳಿಗೆ ಕಾಂಪೌಂಡ್ ಗೋಡೆಗಳ ನಿರ್ಮಾಣ.
2) ನೀರು ಸರಬರಾಜು ಮತ್ತು ನೈರ್ಮಲ್ಯ.
3) ಸಾರ್ವಜನಿಕ ಒಳಚರಂಡಿ ಯೋಜನೆಗಳು.
4) ಕೊಂಡಿ ಹಾಗೂ ಕೂಡು ರಸ್ತೆಗಳನ್ನೊಳಗೊಂಡಂತೆ ಸರ್ವ ಋತು ರಸ್ತೆಗಳ ನಿರ್ಮಾಣ.
5) ಸಾರ್ವಜನಿಕ ಆರೋಗ್ಯ ಕಟ್ಟಡಗಳು.
6) ಸಾರ್ವಜನಿಕ ಶೌಚಾಲಯ ಮತ್ತು ಸ್ನಾನಗೃಹಗಳು.
7) ಕಾಲು ಸೇತುವೆಗಳು.
8) ಸೇತುವೆಗಳು ಮತ್ತು ಕಲ್ವರ್ಟ್‌ಗಳ ನಿರ್ಮಾಣ.
9) ಕೊಳಚೆ ಹಾಗೂ ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗಗಳ ನಿವಾಸ ಪ್ರದೇಶಗಳಿಗೆ ನಾಗರೀಕ ಸೌಲಭ್ಯಗಳ ಒದಗಿಸುವಿಕೆ.
10) ಬಸ್ ತಂಗುದಾಣಗಳು.
11) ಪಶುವೈದ್ಯಕೀಯ ಕಟ್ಟಡಗಳು.
12) ಶಾಲಾ ಕಾಲೇಜುಗಳಿಗೆ ಕ್ರೀಡಾ ಸಾಮಗ್ರಿಗಳ ಸರಬರಾಜು.
13) ಗ್ರಾಮಗಳಲ್ಲಿನ ಪಶುಗಳಿಗೆ ನೀರು ಸೌಲಭ್ಯಗಳ ಪೂರೈಕೆ.
14) ಕಣಗಳ ನಿರ್ಮಾಣ.
15) ಸಮುದಾಯ ಕಟ್ಟಡಗಳು.

16) ಶಾಲೆಗಳಿಗೆ ಶೌಚಾಲಯ ಪೂರೈಕೆ.
17) ಶಾಲೆಗಳಿಗೆ ನೀರು ಪೂರೈಕೆ.

**ನಿಷಿದ್ಧಗೊಳಿಸಿದ ಕಾಮಗಾರಿಗಳು:**

1) ರಾಜ್ಯ : ಕೇಂದ್ರ ಸರ್ಕಾರದ ಹಾಗೂ ಸರ್ಕಾರದ ಇತರ ಸಂಸ್ಥೆಗಳ ಕಛೇರಿ ಕಟ್ಟಡಗಳು ಹಾಗೂ ವಸತಿ ಗೃಹಗಳು.
2) ವಾಣಿಜ್ಯ ಟ್ರಸ್ಟ್‌ಗಳು, ನೋಂದಾಯಿತ ಸಂಘ ಸಂಸ್ಥೆಗಳು, ಖಾಸಗಿ ಅಥವಾ ಸಹಕಾರ ಸಂಘ ಸಂಸ್ಥೆಗಳಿಗೆ ಸಂಬಂಧಿಸಿದ ಕಾಮಗಾರಿಗಳು.
3) ಯಾವುದೇ ವಿಧದ ಕಾಮಗಾರಿಗಳ ದುರಸ್ತಿ ಹಾಗೂ ನಿರ್ವಹಣೆ [ದೀರ್ಘಕಾಲಿಕ ಆಸ್ತಿಗಳನ್ನು ಹೊರತುಪಡಿಸಿ]
4) ಅನುದಾನ ಹಾಗೂ ಸಾಲ.
5) ಸ್ಮರಣಾರ್ಥ ಕಟ್ಟಡಗಳು ಹಾಗೂ ಸ್ಮರಣೆಗಳು.
6) ಯಾವುದೇ ವಿಧದ ದಾಸ್ತಾನಿನ ಖರೀದಿ.
7) ಭೂ ಸ್ವಾಧೀನ ಹಾಗೂ ಭೂ ಪರಿಹಾರ.
8) ಎಲ್ಲಾ ವೈಯಕ್ತಿಕ ಪ್ರಯೋಜನವಾಗುವ ಆಸ್ತಿಗಳು.
9) ಧಾರ್ಮಿಕ ಕಟ್ಟಡಗಳು ಹಾಗೂ ಪೂಜಾ ಸ್ಥಳಗಳು.

ಈ ಆದೇಶದಲ್ಲಿ ಸೂಚಿಸಿರುವ ಕಾಮಗಾರಿಗಳನ್ನು ಹೊರತುಪಡಿಸಿ ಯಾವುದೇ ಇತರ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಬಾರದು. ಈ ಯೋಜನೆಯನ್ನು ಅನುಷ್ಠಾನಗೊಳಿಸುವಾಗ ಸರ್ಕಾರಿ ಆದೇಶ ಸಂಖ್ಯೆ: ಪಿಡಿ 486 ಪಿಎಂಎಂ 2001, ದಿನಾಂಕ: 16.07.2001ರಲ್ಲಿ ನೀಡಿರುವ ಇತರ ಷರತ್ತುಗಳನ್ನು ಕಡ್ಡಾಯವಾಗಿ ಪಾಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ಶಿವಲಿಂಗಯ್ಯ**
ಪಿ.ಆರ್. 723
ಸರ್ಕಾರದ ಅಧೀನ ಕಾರ್ಯದರ್ಶಿ-1 ಮತ್ತು 2,
ಯೋಜನೆ ಹಾಗೂ ಸಾಂಖ್ಯಿಕ ಇಲಾಖೆ.

## ಆರ್ಥಿಕ ಸಚಿವಾಲಯ

**ವಿಷಯ:** ಕರ್ನಾಟಕ ರಾಜ್ಯ ಮೌಲ್ಯ ವರ್ಧಿತ ತೆರಿಗೆ ಸಲಹಾ ಸಮಿತಿಯನ್ನು ರಚಿಸುವ ಬಗ್ಗೆ.

**ಪ್ರಸ್ತಾವನೆ:**

ಕರ್ನಾಟಕ ರಾಜ್ಯದಲ್ಲಿ ಮೌಲ್ಯವರ್ಧಿತ ತೆರಿಗೆ ಅಧಿನಿಯಮ, 2005, ದಿ:1.4.2005 ರಿಂದ ಜಾರಿಗೆ ಬಂದಿದೆ. ಮೌಲ್ಯವರ್ಧಿತ ತೆರಿಗೆ ಪದ್ಧತಿ ಜಾರಿಗೆ ಬಂದಿರುವುದರಿಂದ ಈ ತೆರಿಗೆ ಪದ್ಧತಿಯು ಸುಗಮವಾಗಿ ಕಾರ್ಯನಿರ್ವಹಿಸಲು ಹಲವಾರು ಅಂಶಗಳ ಬಗ್ಗೆ ವಿಶ್ಲೇಷಿಸಬೇಕಾಗಿದೆ. ಇವುಗಳನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸಲು ಎಲ್ಲಾ ಸ್ಟೇಕ್ ಹೋಲ್ಡರ್ಸ್ (Stakeholders) ಪ್ರತಿನಿಧಿಗಳು ಹೊಸ ತೆರಿಗೆ ಪದ್ಧತಿಯಿಂದ ರಾಜ್ಯದ ತೆರಿಗೆ ಸಂಗ್ರಹಣೆ, ತೆರಿಗೆಯ ವ್ಯಾಪ್ತಿಯನ್ನು ವಿಸ್ತರಿಸುವುದರ ಜೊತೆಗೆ ಈ ಹೊಸ ಪದ್ಧತಿ ಹೇಗೆ ಕರದಾತರಿಗೆ ಸ್ನೇಹಪರವಾಗಿದೆ ಎಂಬುದರ ಬಗ್ಗೆ ಸಲಹೆ ಸೂಚನೆ ಅಗತ್ಯವಿರುತ್ತದೆ.

ಆದುದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 142 ಸಿಎಸ್‌ಇ 2005, ಬೆಂಗಳೂರು, ದಿನಾಂಕ: 9ನೇ ಮೇ 2005**

ಕರ್ನಾಟಕ ರಾಜ್ಯದ ಉಪ ಮುಖ್ಯಮಂತ್ರಿ ಹಾಗೂ ಹಣಕಾಸು ಸಚಿವರ ಅಧ್ಯಕ್ಷತೆಯಲ್ಲಿ ಈ ಕೆಳಕಂಡ ಸದಸ್ಯರನ್ನೊಳಗೊಂಡ ರಾಜ್ಯ ಮಟ್ಟದ ಮೌಲ್ಯವರ್ಧಿತ ತೆರಿಗೆ ಸಲಹಾ ಸಮಿತಿಯನ್ನು ಒಂದು ವರ್ಷದ ಅವಧಿಗೆ ರಚಿಸಿದೆ.

| | | | |
|---|---|---|---|
| 1. | ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಹಣಕಾಸು ಸಚಿವರು | - | ಅಧ್ಯಕ್ಷರು |
| 2. | ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ | - | ಸದಸ್ಯರು |
| 3. | ಪ್ರಧಾನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ | - | ಸದಸ್ಯರು |
| 4. | ಕಾರ್ಯದರ್ಶಿ, (ಆ ಮತ್ತು ಸಂ), ಆರ್ಥಿಕ ಇಲಾಖೆ | - | ಸದಸ್ಯರು |
| 5. | ನಿರ್ದೇಶಕರು, ಕೃಷಿ ಮಾರುಕಟ್ಟೆ ಇಲಾಖೆ, ಬೆಂಗಳೂರು | - | ಸದಸ್ಯರು |
| 6. | ಕನ್‌ಫೆಡರೇಷನ್ ಆಫ್ ಇಂಡಿಯನ್ ಇಂಡಸ್ಟ್ರೀಸ್‌ನಿಂದ ನಾಮಕರಣಗೊಂಡವರು | - | ಸದಸ್ಯರು |
| 7. | ಇನ್ಸ್‌ಟಿಟ್ಯೂಟ್ ಫಾರ್ ಸೋಶಿಯಲ್ ಅಂಡ್ ಎಕನಾಮಿಕ್ ಚೇಂಜ್, ಬೆಂಗಳೂರು ಇವರಿಂದ ನಾಮಕರಣಗೊಂಡವರು | - | ಸದಸ್ಯರು |
| 8. | ಅಧ್ಯಕ್ಷರು, ಇನ್ಸ್‌ಟಿಟ್ಯೂಟ್ ಆಫ್ ಚಾರ್ಟರ್ಡ್ ಅಕೌಂಟೆಂಟ್ಸ್ ಆಫ್ ಇಂಡಿಯಾ | - | ಸದಸ್ಯರು |
| 9. | ಅಧ್ಯಕ್ಷರು, ಕರ್ನಾಟಕ ಟ್ಯಾಕ್ಸ್ ಬಾರ್ ಅಸೋಸಿಯೇಷನ್, ಬೆಂಗಳೂರು | - | ಸದಸ್ಯರು |
| 10. | ಅಧ್ಯಕ್ಷರು, ಫೆಡರೇಷನ್ ಕರ್ನಾಟಕ ಛೇಂಬರ್ಸ್ ಆಫ್ ಕಾಮರ್ಸ್ ಅಂಡ್ ಇಂಡಸ್ಟ್ರೀಸ್, ಬೆಂಗಳೂರು. | - | ಸದಸ್ಯರು |
| 11. | ಅಧ್ಯಕ್ಷರು, ದಿ ಗ್ರೇಟ್ ಮೈಸೂರು ಛೇಂಬರ್ಸ್ ಆಫ್ ಕಾಮರ್ಸ್ ಅಂಡ್ ಇಂಡಸ್ಟ್ರೀಸ್, ಬೆಂಗಳೂರು. | - | ಸದಸ್ಯರು |
| 12. | ಅಧ್ಯಕ್ಷರು, ಮೈಸೂರು ಛೇಂಬರ್ಸ್ ಆಫ್ ಕಾಮರ್ಸ್ ಅಂಡ್ ಇಂಡಸ್ಟ್ರೀಸ್, ಮೈಸೂರು | - | ಸದಸ್ಯರು |
| 13. | ಅಧ್ಯಕ್ಷರು, ಕರ್ನಾಟಕ ಛೇಂಬರ್ಸ್ ಆಫ್ ಕಾಮರ್ಸ್ ಅಂಡ್ ಇಂಡಸ್ಟ್ರೀಸ್, ಹುಬ್ಬಳ್ಳಿ | - | ಸದಸ್ಯರು |
| 14. | ಅಧ್ಯಕ್ಷರು, ಬೆಳಗಾಂ ಛೇಂಬರ್ಸ್ ಆಫ್ ಕಾಮರ್ಸ್ ಅಂಡ್ ಇಂಡಸ್ಟ್ರೀಸ್, ಬೆಳಗಾಂ. | - | ಸದಸ್ಯರು |
| 15. | ಅಧ್ಯಕ್ಷರು, ಹೈದರಾಬಾದ್-ಕರ್ನಾಟಕ ಛೇಂಬರ್ಸ್ ಆಫ್ ಕಾಮರ್ಸ್ ಅಂಡ್ ಇಂಡಸ್ಟ್ರೀಸ್, ಗುಲ್ಬರ್ಗಾ. | - | ಸದಸ್ಯರು |
| 16. | ಅಧ್ಯಕ್ಷರು, ಕರ್ನಾಟಕ ಸಣ್ಣ ಕೈಗಾರಿಕೆಗಳ ಸಂಘ, ಬೆಂಗಳೂರು. | - | ಸದಸ್ಯರು |
| 17. | ಅಧ್ಯಕ್ಷರು, ಕರ್ನಾಟಕ ಫಿಲಂ ಛೇಂಬರ್ಸ್ ಆಫ್ ಕಾಮರ್ಸ್. | - | ಸದಸ್ಯರು |
| 18. | ಅಧ್ಯಕ್ಷರು, ಪ್ಲಾಂಟರ್ಸ್ ಅಸೋಸಿಯೇಷನ್ ಆಫ್ ಕರ್ನಾಟಕ | - | ಸದಸ್ಯರು |

19. ಅಧ್ಯಕ್ಷರು, ರಾಜ್ಯ ಹೋಟೆಲುಗಳ ಮಾಲೀಕರ ಸಂಘ, ಬೆಂಗಳೂರು. - ಸದಸ್ಯರು
20. ವಾಣಿಜ್ಯ ತೆರಿಗೆ ಆಯುಕ್ತರು - ಸದಸ್ಯ-ಕಾರ್ಯದರ್ಶಿ
21. ಶ್ರೀ ಬಿ.ಟಿ. ಮನೋಹರ್, ತೆರಿಗೆ ಸಲಹೆಗಾರರು - ಸದಸ್ಯರು
22. ಶ್ರೀ ಡಿ. ವೆಂಕಟೇಶ್, ತೆರಿಗೆ ವಕೀಲರು - ಸದಸ್ಯರು
23. ಶ್ರೀ ಎಸ್. ವೆಂಕಟರಮಣಿ, ಚಾರ್ಟರ್ಡ್ ಅಕೌಂಟೆಂಟ್ - ಸದಸ್ಯರು
24. ಶ್ರೀ ಬಿ.ಕೆ. ಗೋಯಲ್, ತೆರಿಗೆ ವಿಶ್ಲೇಷಕರು - ಸದಸ್ಯರು
25. ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಕಾನೂನು ಮತ್ತು ಕಾರ್ಯನೀತಿ) - ಖಾಯಂ ಆಹ್ವಾನಿತರು

ಸಮಿತಿಯು ಪ್ರತಿ ತ್ರೈಮಾಸಿಕವಾಗಿ ಸಭೆ ಸೇರಿ ವಾಣಿಜ್ಯ ತೆರಿಗೆ ಇಲಾಖೆಯ ವ್ಯಾಪ್ತಿಗೆ ಬರುವ ಎಲ್ಲಾ ಕಾಯ್ದೆಗಳಿಗೆ ಸಂಬಂಧಿಸಿದಂತೆ ಈ ಕೆಳಗಿನ ಅಂಶಗಳನ್ನು ಪರಿಶೀಲಿಸಿ ಸೂಕ್ತ ಸಲಹೆ ನೀಡಬೇಕು.

(ಅ) VAT ತೆರಿಗೆ ಸರಳೀಕರಣ, ರಚನೆ, ವಿಧಿಗಳನ್ನು ರೂಪಿಸುವುದು.

(ಆ) ಎಂಪವರ್ಡ್ ಸಮಿತಿಯ ಮುಂದೆ ಮಂಡಿಸಬೇಕಾದ ಅಂಶಗಳ ಬಗ್ಗೆ ಚರ್ಚಿಸುವುದು.

(ಇ) ಚಾಲ್ತಿಯಲ್ಲಿರುವ ತೆರಿಗೆ ಆಧಾರದ ಮೇಲೆ ಆದಾಯವನ್ನು ಹೆಚ್ಚಿಸುವುದು, ತೆರಿಗೆ ಸೋರುವಿಕೆಯನ್ನು ತಡೆಗಟ್ಟುವುದು.

(ಈ) ಕರದಾತರು ಹಾಗೂ ಇಲಾಖೆಯ ನಡುವೆ ಸರಿಯಾದ ಸಾಮರಸ್ಯ ಬೆಳೆಸುವುದು.

(ಉ) ವ್ಯಾಪಾರಿಗಳು ಮತ್ತೆ ಕೈಗಾರಿಕೆಗಳು ಏನಾದರೂ ತೊಂದರೆ ಅನುಭವಿಸುತ್ತಿದ್ದಲ್ಲಿ ಸರ್ಕಾರಕ್ಕೆ ಬರುವ ಆದಾಯಕ್ಕೆ ಚ್ಯುತಿಯಾಗದಂತೆ ಅಂತಹ ತೊಂದರೆಗಳನ್ನು ನಿವಾರಿಸುವುದು.

(ಊ) ವೃತ್ತಿ ತೆರಿಗೆ, ಮೌಲ್ಯಾಧಾರಿತ ತೆರಿಗೆ, ಜೂಜು ತೆರಿಗೆ ಮುಂತಾದ ತೆರಿಗೆಗಳ ಬಗ್ಗೆ ಚರ್ಚಿಸಿ ನಿರ್ಣಯ ತೆಗೆದುಕೊಳ್ಳುವುದು.

ಅಧಿಕಾರೇತರ ಸದಸ್ಯರು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 18 ಎಸ್‌ಆರ್‌ಎಸ್ 94, ಬೆಂಗಳೂರು, ದಿನಾಂಕ:30.12.94ರ ಅನ್ವಯ ಭತ್ಯೆಗಳನ್ನು ಪಡೆಯಲು ಅರ್ಹತೆ ಹೊಂದಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಜಿ. ನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ವಾ.ತೆ.-2)

ಪಿ.ಆರ್. 724

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಶಿವಯೋಗಿ ಸಿ. ಕಳಸದ್, ಕೆ.ಎ.ಎಸ್. (ಆ.ಶ್ರೇ) ಅಧಿಕಾರಿ, ಹಾಲಿ ಕಂದಾಯ ಸಚಿವರ ಆಪ್ತಕಾರ್ಯದರ್ಶಿ ಇವರು ದಿನಾಂಕ 11.04.2005 ರಂದು ವಿಮಾನದಲ್ಲಿ ನವದೆಹಲಿಗೆ ಪ್ರಯಾಣ ಮಾಡಿರುವುದಕ್ಕೆ ಘಟನೋತ್ತರ ಅನುಮತಿ ನೀಡುವ ಬಗ್ಗೆ - ಆದೇಶ.

**ಓದಲಾಗಿದೆ:** ಕಂದಾಯ ಸಚಿವರ ಟಿಪ್ಪಣಿ ಸಂ: ಕಂ.ಸ.ಟಿ. 872 2005, ದಿನಾಂಕ: 07.04.2005.

**ಪ್ರಸ್ತಾವನೆ:**

ಮೇಲೆ ಓದಲಾದ ಟಿಪ್ಪಣಿಯಲ್ಲಿ ಕಂದಾಯ ಸಚಿವರು ದಿನಾಂಕ 05.04.2005 ರಿಂದ 18.4.2005 ರಂದು ಆಸ್ಟ್ರೇಲಿಯಾ ಮತ್ತು ನ್ಯೂಜಿಲ್ಯಾಂಡ್ ದೇಶಗಳಿಗೆ ಪ್ರವಾಸ ಕೈಗೊಳ್ಳಲಿದ್ದು, ಸದರಿ ವಿಷಯಕ್ಕೆ ಸಂಬಂಧಿಸಿದಂತೆ ಅಗತ್ಯವಿರುವ ಕೇಂದ್ರ ಸರ್ಕಾರದ ಅನುಮೋದನೆಯನ್ನು ಪಡೆಯಲು ಹಾಗೂ ಕೇಂದ್ರದಲ್ಲಿ ಕಂದಾಯ ಇಲಾಖೆಯ ಬಾಕಿ ಇರುವ ಪ್ರಸ್ತಾವನೆಗಳ ಬಗ್ಗೆ ಅಧಿಕಾರಿಗಳೊಂದಿಗೆ ಚರ್ಚಿಸುವ ಸಲುವಾಗಿ ತಮ್ಮ ಆಪ್ತ ಕಾರ್ಯದರ್ಶಿಯವರಾದ ಶ್ರೀ ಶಿವಯೋಗಿ ಸಿ. ಕಳಸದ್‌ರವರನ್ನು ನವದೆಹಲಿಗೆ ಹೋಗಿ ಬರುವಂತೆ ಸೂಚಿಸಿರುವುದಾಗಿ ತಿಳಿಸುತ್ತಾ, ಸದರಿ ಆಪ್ತ ಕಾರ್ಯದರ್ಶಿಯವರು ದಿನಾಂಕ: 11.4.2005ರಂದು ನವದೆಹಲಿಗೆ ವಿಮಾನದಲ್ಲಿ ಹೋಗಿ ಬರಲು ಅನುಮತಿ ನೀಡಬೇಕಾಗಿ ಕೋರಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: 163 ಆಸೇಇ 05, ಬೆಂಗಳೂರು, ದಿನಾಂಕ: 12ನೇ ಮೇ 2005**

ಶ್ರೀ ಶಿವಯೋಗಿ ಸಿ.ಕಳಸದ್, ಕೆ.ಎ.ಎಸ್. (ಆಯ್ಕೆ ಶ್ರೇಣಿ) ಅಧಿಕಾರಿ, ಹಾಲಿ ಕಂದಾಯ ಸಚಿವರ ಆಪ್ತ ಕಾರ್ಯದರ್ಶಿ ಇವರು ಸಚಿವರ ಸೂಚನೆಯ ಮೇರೆಗೆ ದಿನಾಂಕ 11.4.2005ರಂದು ನವದೆಹಲಿಗೆ ವಿಮಾನದಲ್ಲಿ ಪ್ರಯಾಣಿಸಿ ದಿನಾಂಕ: 13.04.2005ರಂದು ಬೆಂಗಳೂರಿಗೆ ಹಿಂದಿರುಗಿರುವುದಕ್ಕೆ ಘಟನೋತ್ತರ ಅನುಮತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

ಪಿ.ಆರ್. 725

## ENERGY SECRETARIAT

**Sub:** Transfer of 0.8 M.W. Wind Power Capacity in favour of M/s Mahalaxmi Construction Corporation Limited Orders relating to:

**Read:**
1. Government order No: DE 26 NCE 1999 dated: 13.5.1999.
2. Government order No: EN 76 NCE 2005 dated: 18.3.2005.
3. Letter No. KRED/08/MCCL/2005/822 dated 04.5.2005 received from the MD, KREDL, Bangalore received from the MD, KREDL, Bangalore.

**Preamble:-**

In the Government Order dated 18.3.2005 read at (2) above, sanction has been accorded for implementation of 192 M.W. capacity Wind Power Project at Jogimatti Wind Zone, Chitradurga, District to M/s Enercon India Ltd.

Now, the Managing Director, Karnataka Renewable Energy Development Limited, Bangalore in his letter dated 04.05.2005 read at (3) above, has recommended to the Government for transfer of 0.8 M.W. Wind Power capacity in favour of M/s Mahalaxmi Construction Corporation Limited, at Lakkihalli village, Hiriyur Taluk, Chitradurga District from out of the sanctioned 192 M.W. capacity of M/s Enercon India Limited.

The proposal has been examined and pass the following order:

**Government Order No: EN 133 NCE 2005, Bangalore, Dated: 20th May 2005**

Government are pleased to accord sanction for transfer of 0.8 M.W. Wind Power capacity in favour of M/s Mahalaxmi Construction Corporation Limited at Lakkihalli village, Hiriyur Taluk, Chitradurga District from out of the sanctioned 192 M.W. capacity of M/s Enercon India Ltd., allotted in Government Order DE 76 NCE 2005 dated 18.3.2005.

The terms and conditions of the Government Order read at (1) above, shall IPSO FACTO applicable.

By Order and in the name of the Governor of Karnataka,
**SURESH B. KRISHNAPPANAVAR**
Under Secretary to Government,
Energy Department.

P.R. 726

**ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ**

**ವಿಷಯ:** ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯದ ಕೇಂದ್ರ ಕಛೇರಿಯನ್ನು ಹೊಸಪೇಟೆಯಿಂದ ಮೈಸೂರಿಗೆ ಮರು ಸ್ಥಳಾಂತರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಂಕಇ 137 ಕೆಎಂಯು 2000, ದಿ: 29.9.2000.
2. ತಿದ್ದುಪಡಿ ಆದೇಶ ಸಂಖ್ಯೆ: ಸಂಕಇ 137 ಕೆಎಂಯು 2000, ದಿ: 16.4.2001.
3. ಸರ್ಕಾರದ ಆದೇಶ ಸಂಖ್ಯೆ: ಸಂಕಇ 69 ಕೆಎಂಯು 2001, ದಿ: 12.6.2001.
4. ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ರವರ ಪತ್ರ ಕ್ರಮಾಂಕ ಡಿಎಎಂ:ಇಎಸ್‌ಟಿ-3: 2004-05 ದಿ: 13.7.2004.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿನ ಸರ್ಕಾರದ ಆದೇಶದಲ್ಲಿ ಪ್ರಾಚ್ಯುವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯದ ಕಛೇರಿಯನ್ನು ಮೈಸೂರಿನಿಂದ ಹಂಪಿಗೆ ಸ್ಥಳಾಂತರಿಸಲು ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿನ ತಿದ್ದುಪಡಿ ಆದೇಶದಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯದ ಕಛೇರಿಯನ್ನು ಮೈಸೂರಿನಿಂದ ಹಂಪಿಗೆ ಸ್ಥಳಾಂತರಿಸಲು ಆದೇಶಿಸಲಾಗಿದೆ ಎಂಬುವುದರ ಬದಲಿಗೆ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯದ ಕಛೇರಿಯನ್ನು ಮೈಸೂರಿನಿಂದ ಹಂಪಿಗೆ ಸಿಬ್ಬಂದಿ ಸಮೇತ ದಿನಾಂಕ 29.2.2000ರಿಂದ ಜಾರಿಗೆ ಬರುವಂತೆ ವರ್ಗಾಯಿಸಿ ಸ್ಥಳಾಂತರಿಸಲು ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿನ ಸರ್ಕಾರದ ಆದೇಶದಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯದ ಕೇಂದ್ರ ಕಛೇರಿಯನ್ನು ಹಂಪಿಗೆ ಸಿಬ್ಬಂದಿ ಸಮೇತ ವರ್ಗಾಯಿಸಿರುವುದರಿಂದ ತಾತ್ಕಾಲಿಕವಾಗಿ ಮುಂದಿನ ಆದೇಶದವರೆಗೆ ಹಂಪಿ - ಕಮಲಾಪುರ ಉಪನಿರ್ದೇಶಕರ ಕಛೇರಿಯಲ್ಲಿ ಕಾರ್ಯನಿರ್ವಹಿಸುವುದರ ಜೊತೆಗೆ ಹೊಸಪೇಟೆಯಲ್ಲಿ ಒಂದು ವರ್ಷದ ಅವಧಿಗೆ ಬಾಡಿಗೆ ಕಟ್ಟಡದಲ್ಲಿ ಕೇಂದ್ರ ಕಛೇರಿಯನ್ನು ನಡೆಸಲು ಆದೇಶಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರಲ್ಲಿನ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯದ ನಿರ್ದೇಶಕರ ದಿನಾಂಕ: 13.7.2004ರ ಪತ್ರದಲ್ಲಿ ಹಂಪಿಯಲ್ಲಿರುವ ಸ್ಮಾರಕಗಳ ಸಂರಕ್ಷಣೆ ಮತ್ತು ಅಭಿವೃದ್ಧಿಗೆ ಅನುಕೂಲವಾಗುವಂತೆ ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರವು ಅಸ್ತಿತ್ವಕ್ಕೆ ಬಂದಿದ್ದು ಅಲ್ಲಿನ ಸ್ಮಾರಕಗಳ ಸಂರಕ್ಷಣೆ ಮತ್ತು ಅಭಿವೃದ್ಧಿ ಕಾರ್ಯಕ್ಷೇತ್ರವನ್ನು ಪ್ರಾಧಿಕಾರವು ವಹಿಸಿಕೊಂಡಿರುತ್ತದೆಂದು ತಿಳಿಸಿರುತ್ತಾರೆ.

ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯದ ಕೇಂದ್ರ ಕಛೇರಿ ಮೈಸೂರಿನಿಂದ ಹೊಸಪೇಟೆಗೆ ಸ್ಥಳಾಂತರಗೊಂಡಿರುವುದರಿಂದ ಅನಗತ್ಯ ಕಟ್ಟಡದ ಬಾಡಿಗೆ, ಪ್ರಯಾಣ ವೆಚ್ಚ ಹಾಗೂ ಇನ್ನಿತರೆ ವೆಚ್ಚಗಳು ಅಧಿಕವಾಗಿದ್ದು, ಆರ್ಥಿಕವಾಗಿ ಸರ್ಕಾರಕ್ಕೆ ಹೊರೆಯಾಗಿದ್ದು, ಆಯವ್ಯಯದಲ್ಲಿ ನಿಗದಿಪಡಿಸಿರುವ ಅನುದಾನವೂ ಕೂಡ ಸಾಕಾಗುತ್ತಿಲ್ಲವೆಂದು ನಿರ್ದೇಶಕರು ತಮ್ಮ ಪ್ರಸ್ತಾವನೆಯಲ್ಲಿ ವಿವರಿಸಿರುತ್ತಾರೆ. ಜೊತೆಗೆ ಪ್ರಸ್ತುತ ಆಯುಕ್ತರು, ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ಎಂಬ ಹೊಸ ಹುದ್ದೆಯನ್ನು ಸೃಜಿಸಿದ್ದು, ಅದು ಮೈಸೂರಿನ ಅರಮನೆ ಆವರಣದ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ನಿರ್ದೇಶಕರ ಕಛೇರಿ ಮತ್ತು ಆಯುಕ್ತರ ಕಛೇರಿಗಳು ಒಂದೇ ಸ್ಥಳದಲ್ಲಿ ಕಾರ್ಯನಿರ್ವಹಿಸಿದಲ್ಲಿ ಇಲಾಖೆಯ ಸಂಶೋಧನಾ ಕಾರ್ಯಗಳು, ಅಭಿವೃದ್ಧಿ ಕಾರ್ಯಗಳು ಹಾಗೂ ಸಮರ್ಪಕ ಆಡಳಿತ ನಿರ್ವಹಣೆಯು ಸುಲಲಿತವಾಗಿ ನಡೆಯುವುದೆಂದು ತಿಳಿಸಿರುತ್ತಾರೆ. ಆದ್ದರಿಂದ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆಯ ಸರ್ವತೋಮುಖ ಕಾರ್ಯಚಟುವಟಿಕೆಗಳಿಗೆ ಪೂರಕವಾಗುವ ನಿಟ್ಟಿನಲ್ಲಿ ಹಾಗೂ ಇಲಾಖೆಯ ಆರ್ಥಿಕ ಮತ್ತು ಆಡಳಿತಾತ್ಮಕ ಹಿತದೃಷ್ಟಿಯಿಂದ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯದ ಕೇಂದ್ರ ಕಛೇರಿಯನ್ನು ಬಳ್ಳಾರಿ ಜಿಲ್ಲೆಯ ಹೊಸಪೇಟೆಯಿಂದ ಮೂಲಸ್ಥಾನವಾದ ಮೈಸೂರಿಗೆ ಸ್ಥಳಾಂತರಿಸಿ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ.

ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ ರವರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 140 ಕೆಎಂಯು 2004, ಬೆಂಗಳೂರು, ದಿನಾಂಕ: 9ನೇ ಮೇ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯದ ಕೇಂದ್ರ ಕಛೇರಿಯನ್ನು ಸಿಬ್ಬಂದಿ ಸಮೇತ ಬಳ್ಳಾರಿ ಜಿಲ್ಲೆಯ ಹೊಸಪೇಟೆಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ಮೈಸೂರಿಗೆ ಮರುಸ್ಥಳಾಂತರಿಸಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ವಿಶಾಲಾಕ್ಷಮ್ಮ**

ಪಿ.ಆರ್. 727

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಅರಣ್ಯ ಪರಿಸರ ಮತ್ತು ಜೀವಿ ಪರಿಸ್ಥಿತಿ ಶಾಸ್ತ್ರ, ವಾರ್ತಾ ಪ್ರವಾಸೋದ್ಯಮ ಮತ್ತು ಯುವಜನ ಸೇವೆ ಹಾಗೂ ಕಂದಾಯ, ಒಳಾಡಳಿತ ಮತ್ತು ಸಾರಿಗೆ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಗಳಲ್ಲಿನ ಆಂತರಿಕ ಆರ್ಥಿಕ ಸಲಹೆಗಾರರ ಹುದ್ದೆ ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 4 ಸಸಿವಿ 92, ದಿನಾಂಕ: 13.8.92.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 275 ಸಆಸೇ 93, ದಿನಾಂಕ: 27.9.1993.
3. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 370 ಸಆಸೇ 95 (2) ದಿನಾಂಕ: 9.11.2000.
4. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 370 ಸಆಸೇ 95 (2) ದಿನಾಂಕ: 6.12.2000.
5. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 19 ಸಸಿವಿ 2001 (2) ದಿನಾಂಕ: 25.5.2001.
6. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 27 ಸಸಿವಿ 2002 ದಿನಾಂಕ: 21.5.2002.
7. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 41 ಸಸಿವಿ 2003, ದಿನಾಂಕ: 12.3.2004.
8. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 61 ಅಹಿಸೇ 99 ದಿನಾಂಕ: 20.10.1999.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರದ ಸಚಿವಾಲಯದ ಕೆಳಕಂಡ ಇಲಾಖೆಗಳಲ್ಲಿ ಆಂತರಿಕ ಆರ್ಥಿಕ ಸಲಹೆಗಾರರ ಶಾಖೆಗಳನ್ನು 2 ವರ್ಷಗಳ ಅವಧಿಗೆ ಮಂಜೂರು ಮಾಡಲಾಗಿರುತ್ತದೆ.

1. ಪಶುಸಂಗೋಪನೆ ಮೀನುಗಾರಿಕೆ ಮತ್ತು ಅರಣ್ಯ ಇಲಾಖೆ.
2. ವಾರ್ತಾ ಪ್ರವಾಸೋದ್ಯಮ ಯುವಜನ ಸೇವಾ ಹಾಗೂ ಕಂದಾಯ ಇಲಾಖೆ.
3. ಆಹಾರ ಮತ್ತು ಸಾರಿಗೆ ಹಾಗೂ ಸಹಕಾರ ಇಲಾಖೆ.
4. ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಹಾಗೂ ಮೇಲ್ಕಂಡ ಇಲಾಖೆಗಳ ಆಂತರಿಕ ಆರ್ಥಿಕ ಸಲಹೆಗಾರರ ಶಾಖೆಗಳಿಗೆ ಈ ಕೆಳಕಂಡಂತೆ ಪೂರಕ ಸಿಬ್ಬಂದಿ ಹುದ್ದೆಗಳನ್ನು ಮಂಜೂರು ಮಾಡಲಾಗಿರುತ್ತದೆ.

| ಕ್ರ. ಸಂ. | ಹುದ್ದೆ | ಒಂದು ಆಂತರಿಕ ಆರ್ಥಿಕ ವಿಭಾಗಕ್ಕೆ ಹುದ್ದೆಗಳ ಸಂಖ್ಯೆ | ನಾಲ್ಕು ಆಂತರಿಕ ಆರ್ಥಿಕ ವಿಭಾಗಗಳಿಗೆ ಮಂಜೂರಾದ ಹುದ್ದೆಗಳ ಸಂಖ್ಯೆ |
|---|---|---|---|
| 1. | ಆಂತರಿಕ ಆರ್ಥಿಕ ಸಲಹೆಗಾರರು | 01 | 04 |
| | **ಆಂತರಿಕ ಆರ್ಥಿಕ ಶಾಖೆ** | | |
| 2. | ಶಾಖಾಧಿಕಾರಿ | 01 | 04 |
| 3. | ಹಿರಿಯ ಸಹಾಯಕ | 01 | 04 |
| 4. | ಸಹಾಯಕ | 02 | 08 |
| 5. | ಶೀಘ್ರಲಿಪಿಗಾರ | 01 | 04 |
| 6. | ಬೆರಳಚ್ಚುಗಾರ | 01 | 04 |
| 7. | ಕಿರಿಯ ಸಹಾಯಕ | 01 | 04 |
| 8. | ದಲಾಯತ್ | 01 | 04 |
| | **ಆಯವ್ಯಯ ಮತ್ತು ಲೆಕ್ಕಪತ್ರ ಶಾಖೆ** | | |
| 9. | ಶಾಖಾಧಿಕಾರಿ | 01 | 04 |
| 10. | ಹಿರಿಯ ಸಹಾಯಕ | 02 | 08 |
| 11. | ಸಹಾಯಕ | 01 | 04 |
| 12. | ಕಿರಿಯ ಸಹಾಯಕ | 01 | 04 |
| 13. | ಬೆರಳಚ್ಚುಗಾರ | 01 | 04 |
| 14. | ದಲಾಯತ್ | 01 | 04 |
| | **ಒಟ್ಟು** | **16** | **64** |

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಪಶುಸಂಗೋಪನೆ ಮೀನುಗಾರಿಕೆ ಮತ್ತು ಅರಣ್ಯ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಹುದ್ದೆಯನ್ನು ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಗೆ ಹಾಗೂ ಆಹಾರ ಸಾರಿಗೆ ಸಹಕಾರ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಹುದ್ದೆಯನ್ನು ಒಳಾಡಳಿತ ಮತ್ತು ಸಾರಿಗೆ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಹುದ್ದೆ ಎಂದು ಮರು

ಪದನಾಮೀಕರಿಸಲಾಗಿರುತ್ತದೆ. ನಂತರ ಕ್ರಮ ಸಂಖ್ಯೆ (3) ರಿಂದ (7) ರವರೆಗೆ ಓದಲಾಗಿರುವ ಸರ್ಕಾರಿ ಆದೇಶಗಳನ್ವಯ ಈ ಹುದ್ದೆಗಳನ್ನು ದಿನಾಂಕ: 31.12.2004 ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿರುತ್ತದೆ.

ಮೇಲೆ ಕ್ರಮ ಸಂಖ್ಯೆ (8)ರಲ್ಲಿ ಓದಲಾಗಿರುವ ಸರ್ಕಾರಿ ಆದೇಶದಲ್ಲಿ ಆಂತರಿಕ ಆರ್ಥಿಕ ಸಲಹೆಗಾರರ ಈ ಕೆಳಕಂಡ ಶಾಖೆಗಳ ಇಲಾಖೆಯ ಕಿರಿಯ ಸಹಾಯಕರ ಹುದ್ದೆಗಳನ್ನು ರದ್ದುಪಡಿಸಲಾಗಿದೆ. ಪ್ರಸ್ತುತ ಈ ಹುದ್ದೆಗಳನ್ನು ದಿನಾಂಕ: 1.1.2005 ರಿಂದ ಮುಂದುವರೆಸುವ ಬಗ್ಗೆ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 22 ಸಸಿವಿ 2005, ಬೆಂಗಳೂರು, ದಿನಾಂಕ: 19ನೇ ಏಪ್ರಿಲ್ 2005**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಈ ಕೆಳಕಂಡ ಆಂತರಿಕ ಆರ್ಥಿಕ ಸಲಹೆಗಾರರ ಹುದ್ದೆಗಳನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 1.1.2005 ರಿಂದ ಒಂದು ವರ್ಷದವರೆಗೆ ತಾತ್ಕಾಲಿಕವಾಗಿ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

1. ಅರಣ್ಯ, ಪರಿಸರ ಮತ್ತು ಜೀವಿ ಪರಿಸ್ಥಿತಿ ಶಾಸ್ತ್ರ ಇಲಾಖೆ.
2. ವಾರ್ತಾ ಪ್ರವಾಸೋದ್ಯಮ ಮತ್ತು ಯುವಜನ ಸೇವಾ ಹಾಗೂ ಕಂದಾಯ ಇಲಾಖೆ.
3. ಒಳಾಡಳಿತ ಮತ್ತು ಸಾರಿಗೆ ಇಲಾಖೆ.
4. ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

| ಕ್ರ. ಸಂ. | ಹುದ್ದೆ | ಒಂದು ಆಂತರಿಕ ಆರ್ಥಿಕ ವಿಭಾಗಕ್ಕೆ ಹುದ್ದೆಗಳ ಸಂಖ್ಯೆ | ನಾಲ್ಕು ಆಂತರಿಕ ಆರ್ಥಿಕ ವಿಭಾಗಗಳಿಗೆ ಮಂಜೂರಾದ ಹುದ್ದೆಗಳ ಸಂಖ್ಯೆ |
|---|---|---|---|
| 1. | ಆಂತರಿಕ ಆರ್ಥಿಕ ಸಲಹೆಗಾರರು | 01 | 04 |
| | **ಆಂತರಿಕ ಆರ್ಥಿಕ ಶಾಖೆ** | | |
| 2. | ಶಾಖಾಧಿಕಾರಿ | 01 | 04 |
| 3. | ಹಿರಿಯ ಸಹಾಯಕ | 01 | 04 |
| 4. | ಸಹಾಯಕ | 02 | 08 |
| 5. | ಶೀಘ್ರಲಿಪಿಗಾರ | 01 | 04 |
| 6. | ಬೆರಳಚ್ಚುಗಾರ | 01 | 04 |
| 7. | ಕಿರಿಯ ಸಹಾಯಕ | 01 | 04 |
| 8. | ದಲಾಯತ್ | 01 | 04 |
| | **ಆಯವ್ಯಯ ಮತ್ತು ಲೆಕ್ಕಪತ್ರ ಶಾಖೆ** | | |
| 9. | ಶಾಖಾಧಿಕಾರಿ | 01 | 04 |
| 10. | ಹಿರಿಯ ಸಹಾಯಕ | 02 | 08 |
| 11. | ಸಹಾಯಕ | 01 | 04 |
| 12. | ಬೆರಳಚ್ಚುಗಾರ | 01 | 04 |
| 13. | ದಲಾಯತ್ | 01 | 04 |
| | **ಒಟ್ಟು** | **15** | **60** |

ಸದರಿ ಸರ್ಕಾರದ ಆದೇಶವನ್ನು ದಿನಾಂಕ: 10.7.1996ರ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ರನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 728

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

**ವಿಷಯ:** ನೀರಾವರಿ ಇಲಾಖೆಯಲ್ಲಿ ಸೃಜಿಸಲಾಗಿರುವ ಕೃಷ್ಣಾ ಭಾಗ್ಯ ಜಲನಿಗಮದ ವಿಶೇಷ ಕೋಶವನ್ನು ಅದರ ಹುದ್ದೆಗಳೊಂದಿಗೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 14 ಸಸಿವಿ 94, ದಿನಾಂಕ: 7.7.94.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 13 ಸಸಿವಿ 95, ದಿನಾಂಕ: 17.7.95.
3. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 26 ಸಸಿವಿ 95, ದಿನಾಂಕ: 10.6.96.
4. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 15 ಸಸಿವಿ 98, ದಿನಾಂಕ: 12.5.98.
5. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 34 ಸಸಿವಿ 99, ದಿನಾಂಕ: 22.10.99.
6. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 16 ಸಸಿವಿ 2000, ದಿನಾಂಕ: 9.5.2000.
7. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 24 ಸಸಿವಿ 2002, ದಿನಾಂಕ: 8.5.2002.
8. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 52 ಸಸಿವಿ 2003, ದಿನಾಂಕ: 21.6.2003.
9. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 41 ಸಸಿವಿ 2004, ದಿನಾಂಕ: 7.6.2004.
10. ನೀರಾವರಿ ಇಲಾಖೆಯ ಕಡತ ಸಂಖ್ಯೆ: ಜಸಂಇ 36 ಕೆಬಿಎನ್ 2005.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಕೃಷ್ಣಾ ಭಾಗ್ಯ ಜಲನಿಗಮದ ಪ್ರಾರಂಭಿಕ ಕಾರ್ಯಗಳನ್ನು ನಿರ್ವಹಿಸಲು ಕರ್ನಾಟಕ ಸರ್ಕಾರ ಸಚಿವಾಲಯದ ನೀರಾವರಿ ಇಲಾಖೆಯಲ್ಲಿ ಕೆಳಕಂಡ ಹುದ್ದೆಗಳನ್ನು ಒಳಗೊಂಡಂತೆ ಕೃಷ್ಣಾ ಭಾಗ್ಯ ಜಲನಿಗಮದ ವಿಶೇಷ ಕೋಶ ಒಂದನ್ನು ಒಂದು ವರ್ಷದ ಅವಧಿಗೆ ಸೃಜಿಸಲಾಗಿದೆ.

| ಕ್ರ. ಸಂ. | ಹುದ್ದೆ | ಹುದ್ದೆಗಳ ಸಂಖ್ಯೆ |
|---|---|---|
| 1. | ವಿಶೇಷಾಧಿಕಾರಿ ಮತ್ತು ಪದನಿಮಿತ್ತ ಉಪ ಕಾರ್ಯದರ್ಶಿ | 1 ಹುದ್ದೆ |
| 2. | ಅಧೀನ ಕಾರ್ಯದರ್ಶಿ | 1 ಹುದ್ದೆ |
| 3. | ಶಾಖಾಧಿಕಾರಿ | 1 ಹುದ್ದೆ |
| 4. | ಹಿರಿಯ ಸಹಾಯಕರು | 2 ಹುದ್ದೆ |
| 5. | ಸಹಾಯಕರು | 1 ಹುದ್ದೆ |
| 6. | ಕಿರಿಯ ಸಹಾಯಕರು | 1 ಹುದ್ದೆ |
| 7. | ಬೆರಳಚ್ಚುಗಾರರು | 1 ಹುದ್ದೆ |
| 8. | ಶೀಘ್ರಲಿಪಿಗಾರರು | 1 ಹುದ್ದೆ |
| 9. | ದಲಾಯತ್ | 1 ಹುದ್ದೆ |

ಮೇಲ್ಕಂಡ ಹುದ್ದೆಗಳನ್ನು ಕ್ರಮ ಸಂಖ್ಯೆ (2) ರಿಂದ (4) ರವರೆಗೆ ಓದಲಾದ ಸರ್ಕಾರದ ಆದೇಶಗಳಲ್ಲಿ ದಿನಾಂಕ: 31.3.2000 ದವರೆಗೆ ಮುಂದುವರೆಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (5)ರ ಸರ್ಕಾರಿ ಆದೇಶದಲ್ಲಿ ವಿಶೇಷಾಧಿಕಾರಿ ಮತ್ತು ಪದನಿಮಿತ್ತ ಉಪ ಕಾರ್ಯದರ್ಶಿ, ನೀರಾವರಿ ಇಲಾಖೆ (ಕೃಷ್ಣಾ ಭಾಗ್ಯ ಜಲನಿಗಮ ವಿಶೇಷ ಕೋಶ) ಇವರ ಆಪ್ತ ಶಾಖೆಗೆ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳನ್ನು ಸೃಜಿಸಲಾಗಿದೆ.

| | | |
|---|---|---|
| 1. | ಶೀಘ್ರಲಿಪಿಗಾರರು | 1 ಹುದ್ದೆ |
| 2. | ಕಿರಿಯ ಸಹಾಯಕರು | 1 ಹುದ್ದೆ |
| 3. | ಗ್ರೂಪ್ 'ಡಿ' | 1 ಹುದ್ದೆ |

ಮೇಲ್ಕಂಡ ಎಲ್ಲಾ ಹುದ್ದೆಗಳನ್ನು ಕ್ರಮ ಸಂಖ್ಯೆ (9) ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ದಿನಾಂಕ: 31.3.2005 ರವರೆಗೆ ಮುಂದುವರೆಸಲಾಗಿದೆ.

ಮೇಲ್ಕಂಡ ಹುದ್ದೆಯ ಅವಧಿಯು ದಿನಾಂಕ: 31.3.2005ಕ್ಕೆ ಅಂತ್ಯಗೊಂಡಿರುವುದರಿಂದ ಈ ಹುದ್ದೆಗಳನ್ನು ದಿನಾಂಕ: 1.4.2005 ರಿಂದ 31.3.2006 ರವರೆಗೆ ಮುಂದುವರೆಸುವಂತೆ ಕೋರಿ ಜಲಸಂಪನ್ಮೂಲ ಇಲಾಖೆಯ ಮೇಲೆ ಕ್ರಮ ಸಂಖ್ಯೆ (10) ರಲ್ಲಿ ಓದಲಾದ ಕಡತದಲ್ಲಿ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 29 ಸಸಿವಿ 2005, ಬೆಂಗಳೂರು, ದಿನಾಂಕ: 6ನೇ ಮೇ 2005**

ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯ ಕೃಷ್ಣಾ ಭಾಗ್ಯ ಜಲನಿಗಮದ ವಿಶೇಷ ಕೋಶವನ್ನು ಈ ಕೆಳಕಂಡ ಹುದ್ದೆಗಳೊಂದಿಗೆ ದಿನಾಂಕ: 1.4.2005 ರಿಂದ 31.3.2006 ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

| ಕ್ರ. ಸಂ. | ಹುದ್ದೆ | ಹುದ್ದೆಗಳ ಸಂಖ್ಯೆ |
|---|---|---|
| 1. | ವಿಶೇಷಾಧಿಕಾರಿ ಮತ್ತು ಪದನಿಮಿತ್ತ ಉಪ ಕಾರ್ಯದರ್ಶಿ | 1 ಹುದ್ದೆ |
| 2. | ಅಧೀನ ಕಾರ್ಯದರ್ಶಿ | 1 ಹುದ್ದೆ |
| 3. | ಶಾಖಾಧಿಕಾರಿ | 1 ಹುದ್ದೆ |
| 4. | ಹಿರಿಯ ಸಹಾಯಕರು | 2 ಹುದ್ದೆ |
| 5. | ಸಹಾಯಕರು | 1 ಹುದ್ದೆ |
| 6. | ಕಿರಿಯ ಸಹಾಯಕರು | 1 ಹುದ್ದೆ |
| 7. | ಬೆರಳಚ್ಚುಗಾರರು | 1 ಹುದ್ದೆ |
| 8. | ಶೀಘ್ರಲಿಪಿಗಾರರು | 1 ಹುದ್ದೆ |
| 9. | ದಲಾಯತ್ | 1 ಹುದ್ದೆ |
| **ವಿಶೇಷಾಧಿಕಾರಿ ಮತ್ತು ಪದನಿಮಿತ್ತ ಉಪ ಕಾರ್ಯದರ್ಶಿಯವರ ಆಪ್ತ ಶಾಖೆ.** | | |
| 1. | ಶೀಘ್ರಲಿಪಿಗಾರರು | 1 ಹುದ್ದೆ |
| 2. | ಕಿರಿಯ ಸಹಾಯಕರು | 1 ಹುದ್ದೆ |
| 3. | ಗ್ರೂಪ್ 'ಡಿ' | 1 ಹುದ್ದೆ |

ಸದರಿ ಆದೇಶವನ್ನು ಆರ್ಥಿಕ ಇಲಾಖೆಯು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರಲ್ಲಿ ಅನುಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 729

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

## ಇಂಧನ ಸಚಿವಾಲಯ

**ವಿಷಯ:** ಮೆ: ಜೇಬಾ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ 950 ಕಿಲೋವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ - ಆದೇಶ.

**ಓದಲಾಗಿದೆ:**

1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಮಸರಕಲ್/2004/442 ದಿನಾಂಕ: 05.03.2005.
2. ದಿನಾಂಕ: 5.3.2005 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಓದಲಾದ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ: ಜೇಬಾ ಪವರ್ ಪ್ರೈವೇಟ್ ಲಿಮಿಟೆಡ್, ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕಿನ ಮಸರಕಲ್ ಗ್ರಾಮದ ಬಳಿ, ಎನ್.ಆರ್.ಬಿ.ಸಿ.ಯ ಡಿಸ್ಟ್ರಿಬ್ಯೂಟರಿ ನಂ.16ರ ಬ್ರಾಂಚ್ ಡಿಸ್ಟ್ರಿಬ್ಯೂಟರಿ ನಂ.1 ಕ್ಕೆ ಅಡ್ಡಲಾಗಿ 950 ಕಿಲೋವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಕೋರಿ ಸಲ್ಲಿಸಿದ ಅರ್ಜಿಯನ್ನು ಪರಿಶೀಲಿಸಿ ಯೋಜನೆ ತಾಂತ್ರಿಕ ಶಕ್ಯತೆ ವರದಿ, ನಕ್ಷೆಗಳೊಂದಿಗೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯನ್ನು (2)ರಲ್ಲಿ ಓದಲಾದ ಹಂಚಿಕೆ ಸಮಿತಿಯು ಅನುಮೋದಿಸಿದೆ.

ಇದನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 63 ಎನ್‌ಸಿಇ 2005, ಬೆಂಗಳೂರು, ದಿನಾಂಕ: 25ನೇ ಏಪ್ರಿಲ್ 2005**

ಸರ್ಕಾರವು ಮೆ: ಜೇಬಾ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕಿನ ಮಸರಕಲ್ ಗ್ರಾಮದ ಬಳಿ, ಎನ್.ಆರ್.ಬಿ.ಸಿ.ಯ ಡಿಸ್ಟ್ರಿಬ್ಯೂಟರಿ ನಂ. 16ರ ಬ್ರಾಂಚ್ ಡಿಸ್ಟ್ರಿಬ್ಯೂಟರಿ ನಂ.1ಕ್ಕೆ ಅಡ್ಡಲಾಗಿ 950 ಕಿಲೋವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಜಲಸಂಪನ್ಮೂಲ ಇಲಾಖೆಯ ಅನುಮತಿ ಪಡೆಯಬೇಕೆಂಬ ಷರತ್ತಿನೊಂದಿಗೆ ಮತ್ತು ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:-

1.(ಅ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪೆನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಆ) ಅಂತಹ ಒಡಂಬಡಿಕೆಯನ್ನು ರೂ.400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ರೂ. 25,000.00 ದಂತೆ ರೂ.1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2.(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ನೀರಾವರಿ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 730

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಬೆಳಗಾಂ ಜಿಲ್ಲೆ ಚಿಕ್ಕೋಡಿ ತಾಲ್ಲೂಕು ಉಳ್ಳಾಗಡ್ಡಿವಾಡಿ ಏತ ನೀರಾವರಿ ಯೋಜನೆ ಕಾಮಗಾರಿಯ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** ಮುಖ್ಯ ಅಭಿಯಂತರರು, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 17.5.2005ರ ಪತ್ರ ಸಂಖ್ಯೆ: ಮುಇಂ:ಸನೀ(ಉ)ವ:ಬಿಜೆಪಿ:ಸ.ಇಂ-01:05-06/2310

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಅಭಿಯಂತರರು, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಬೆಳಗಾಂ ಜಿಲ್ಲೆ ಚಿಕ್ಕೋಡಿ ತಾಲ್ಲೂಕು ಉಳ್ಳಾಗಡ್ಡಿವಾಡಿ ಏತ ನೀರಾವರಿ ಯೋಜನೆ ಕಾಮಗಾರಿಯ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡುವಂತೆ ಕೋರಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿ ಕಾಮಗಾರಿಯ ಅಂದಾಜು ಪಟ್ಟಿಯನ್ನು 2004-05ನೇ ಸಾಲಿನ ಬೆಳಗಾಂ ಸಣ್ಣ ನೀರಾವರಿ ಮತ್ತು ಲೋಕೋಪಯೋಗಿ ವೃತ್ತಗಳ ಹಾಗೂ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ ದರ ಪಟ್ಟಿ ಪ್ರಕಾರ ರೂ.165 ಲಕ್ಷ ಮೊತ್ತಕ್ಕೆ ತಯಾರಿಸಲಾಗಿದೆ.

2. ಪ್ರಸ್ತಾವನೆಯಲ್ಲಿ ತಿಳಿಸಿರುವಂತೆ ಸದರಿ ಏತ ನೀರಾವರಿ ಯೋಜನೆಯನ್ನು ಬೆಳಗಾಂ ಜಿಲ್ಲೆ ಚಿಕ್ಕೋಡಿ ತಾಲ್ಲೂಕು ಉಳ್ಳಾಗಡ್ಡಿವಾಡಿ ಬಳಿ ನಿರ್ಮಿಸಲು ಉದ್ದೇಶಿಸಲಾಗಿದೆ. ಈ ಯೋಜನೆಗೆ ಕಲ್ಲೊಳ್ಳಿ ಗ್ರಾಮದ ಬಳಿ ಪ್ರಸ್ತುತ ಕೃಷ್ಣಾ ನದಿಗೆ ಅಡ್ಡಲಾಗಿ ಕಟ್ಟಲಾಗಿರುವ ಕಲ್ಲೊಳ್ಳಿ ಬ್ಯಾರೇಜಿನ ಮೇಲ್ಭಾಗದಲ್ಲಿ ಈಗಾಗಲೇ ನಿರ್ಮಿಸಲಾಗಿದ್ದು ನಿಷ್ಕ್ರಿಯಗೊಂಡಿರುವ ಏತ ನೀರಾವರಿ ಯೋಜನೆಯ ಜಾಕ್‌ವೆಲ್, ಪಂಪ್‌ಹೌಸ್, 200 ಹೆಚ್.ಪಿ.ಯ ಒಂದು ಮತ್ತು 100 ಹೆಚ್.ಪಿ.ಯ ಎರಡು ಮೋಟಾರುಗಳು, ಇನ್‌ಟೇಕ್ ಕೊಳವೆ ಮುಂತಾದವುಗಳನ್ನು ದುರಸ್ಥಿ ಮಾಡಿ ಉಪಯೋಗಿಸಿಕೊಳ್ಳಲಾಗುವುದು. ಯೋಜನೆಯ ರೈಸಿಂಗ್ ಮೇನ್‌ನ ಉದ್ದ 7900 ಮೀಟರು ಹಾಗೂ ಕೊಳವೆಯ ವ್ಯಾಸ 400 ಮಿ.ಮೀ. ಇರುತ್ತದೆ. ಇದಕ್ಕಾಗಿ 4ಮೀ x 4ಮೀ x 1.80 ಮೀ ಆಳತೆಯ ವಿತರಣಾ ತೊಟ್ಟಿಯನ್ನು ನಿರ್ಮಿಸಲಾಗುವುದು. ವಿತರಣಾ ತೊಟ್ಟಿಯಿಂದ 3 ಕಾಲುವೆಗಳನ್ನು ನಿರ್ಮಿಸಲಾಗುವುದು. ಅವುಗಳ ಪೈಕಿ ಪೂರ್ವ ದಿಕ್ಕಿನ ಕಾಲುವೆ 200 ಮೀ, ಪಶ್ಚಿಮ ದಿಕ್ಕಿನ ಕಾಲುವೆ 200 ಮೀ ಮತ್ತು ದಕ್ಷಿಣ ದಿಕ್ಕಿನ ಕಾಲುವೆ 100 ಮೀ ಉದ್ದ ಇರುತ್ತದೆ. ಕೃಷ್ಣಾ ನದಿಗೆ ಅಡ್ಡಲಾಗಿ ನಿರ್ಮಿಸಲಾಗಿರುವ ಹಿಪ್ಪರಗಿ ಜಲಾಶಯದ ಹಿನ್ನೀರು ಈ ಯೋಜನೆಗೆ ಲಭ್ಯವಿರುತ್ತದೆ. ಲಭ್ಯವಿರುವ ಅಂಕಿ ಅಂಶಗಳ ಪ್ರಕಾರ ಹಿಪ್ಪರಗಿ ಜಲಾಶಯದ ಹಿನ್ನೀರಿನ ಮಟ್ಟ ಫೆಬ್ರವರಿ ತಿಂಗಳ ಅಂತ್ಯದವರೆಗೆ ಈ ಯೋಜನೆಗೆ ಅಗತ್ಯವಿರುವ ಮಟ್ಟದವರೆಗೆ ಲಭ್ಯವಾಗಲಿದೆ.

3. ಈ ಯೋಜನೆಗೆ ಒಟ್ಟಾರೆ 2.49 ಹೆಕ್ಟೇರು ಖಾಸಗಿ ಜಮೀನಿನ ಅಗತ್ಯವಿದ್ದು ಇದನ್ನು ಭೂಸ್ವಾಧೀನ ಪ್ರಕ್ರಿಯೆ ಮುಖಾಂತರ ಸ್ವಾಧೀನಪಡಿಸಿಕೊಳ್ಳಲಾಗುವುದು.

4. ಸದರಿ ಯೋಜನೆಯಿಂದ ಉಳ್ಳಾಗಡ್ಡಿವಾಡಿ ಗ್ರಾಮದಲ್ಲಿ ಮುಂಗಾರು ಬೆಳೆಗೆ 125 ಹೆಕ್ಟೇರು ಮತ್ತು ಹಿಂಗಾರು ಬೆಳೆಗೆ 70 ಹೆಕ್ಟೇರು ಜಮೀನಿಗೆ ನೀರಾವರಿ ಸೌಲಭ್ಯ ಒದಗಿಸಲು ಉದ್ದೇಶಿಸಲಾಗಿದೆ. ಈ ನೀರನ್ನು ಉಪಯೋಗಿಸಿ ರೈತರು ಕಡಲೆಕಾಯಿ, ಬೇಳೆಕಾಳುಗಳು, ಸೋಯಾ ಬೀನ್ಸ್ ಮುಂತಾದ ಬೆಳೆಗಳನ್ನು ಬೆಳೆಯಬಹುದಾಗಿದೆ.

5. ಈ ಯೋಜನೆಗೆ ಆರ್.ಐ.ಡಿ.ಎಫ್-10ರ ಅಡಿ ನಬಾರ್ಡ್ ಸಂಸ್ಥೆಯಿಂದ ರೂ.142.50 ಲಕ್ಷ ಸಾಲ ಮಂಜೂರಾತಿ ದೊರೆತಿದೆ. ಸದರಿ ಯೋಜನೆಗೆ 2005-06ನೇ ಸಾಲಿನ ಆಯವ್ಯಯದಲ್ಲಿ ಅಂದಾಜು ಮೊತ್ತದ ಶೇಕಡ 30ರಷ್ಟು ಅನುದಾನ ಲಭ್ಯವಿರುತ್ತದೆ.

6. ಮುಖ್ಯ ಅಭಿಯಂತರರು, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ತಮ್ಮ ಪ್ರಸ್ತಾವನೆಯಲ್ಲಿ ತಿಳಿಸಿರುವಂತೆ ಸದರಿ ಯೋಜನೆಯ ಅಂದಾಜು ಪಟ್ಟಿಯನು ತಾಂತ್ರಿಕ ಪರಿಶೀಲನೆಗಾಗಿ ಸಣ್ಣ ನೀರಾವರಿ ಇಲಾಖೆಯ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯ ಮುಂದೆ ಮಂಡಿಸಲಾಗಿದ್ದು, ಸದರಿ ಸಮಿತಿಯು ಅಂದಾಜು ಪಟ್ಟಿಯನ್ನು ಪರಿಶೀಲಿಸಿ ದಿನಾಂಕ: 29.3.2005ರಂದು ನಡೆದ ತನ್ನ 18ನೇ ಸಭೆಯಲ್ಲಿ ಕೆಲವು ಷರತ್ತಿಗೊಳಪಟ್ಟು ತೀರುವಳಿ ನೀಡಿರುತ್ತದೆ.

7. ಈ ಯೋಜನೆಗೆ ಕಲ್ಲೊಳ್ಳಿ ಬ್ಯಾರೇಜಿನ ಮೇಲ್ಭಾಗದಲ್ಲಿ ಈಗಾಗಲೇ ನಿರ್ಮಿಸಲಾಗಿದ್ದು ನಿಷ್ಕ್ರಿಯಗೊಂಡಿರುವ ಏತ ನೀರಾವರಿ ಯೋಜನೆಯ ಜಾಕ್‌ವೆಲ್, ಪಂಪ್‌ಹೌಸ್, 200 ಹೆಚ್.ಪಿ.ಯ ಒಂದು ಮತ್ತು 100 ಹೆಚ್.ಪಿ.ಯ ಎರಡು ಮೋಟಾರುಗಳು, ಇನ್‌ಟೇಕ್ ಕೊಳವೆ ಮುಂತಾದವುಗಳನ್ನು ದುರಸ್ತಿ ಮಾಡಿ ಉಪಯೋಗಿಸಿಕೊಳ್ಳಲಾಗುವ ಉದ್ದೇಶದಿಂದ ಒಟ್ಟಾರೆ ಅಂದಾಜು ವೆಚ್ಚವನ್ನು ಕಡಿಮೆ ಮಾಡಿ ರೂ.150 ಲಕ್ಷಕ್ಕೆ ಸೀಮಿತಗೊಳಿಸಲು ಉದ್ದೇಶಿಸಲಾಗಿದೆ. ಇದರಿಂದಾಗಿ ಯೋಜನೆಯ ಲಾಭ ವೆಚ್ಚದ ಅನುಪಾತ ವಾರ್ಷಿಕ ಶೇಕಡ 10ರ ಬಡ್ಡಿ ದರದಲ್ಲಿ 2.03 ಆಗುತ್ತಿದ್ದು, ಯೋಜನೆಯು ಆರ್ಥಿಕವಾಗಿ ಶಕ್ಯವಾಗಿರುತ್ತದೆ.

8. ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 24 ಏನೀಯೋ 2005, ಬೆಂಗಳೂರು, ದಿನಾಂಕ: 25ನೇ ಮೇ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾಂ ಜಿಲ್ಲೆ ಚಿಕ್ಕೋಡಿ ತಾಲ್ಲೂಕು ಉಳ್ಳಾಗಡ್ಡಿವಾಡಿ ಗ್ರಾಮದ ಬಳಿ ನಿರ್ಮಿಸಲು ಉದ್ದೇಶಿಸಲಾಗಿರುವ ಏತ ನೀರಾವರಿ ಯೋಜನೆ ಕಾಮಗಾರಿಯ 2004-05ನೇ ಸಾಲಿನ ದರಪಟ್ಟಿಯಂತೆ ತಯಾರಿಸಿದ ರೂ.150 ಲಕ್ಷ (ರೂಪಾಯಿ ಒಂದು ನೂರ ಐವತ್ತು ಲಕ್ಷ) ಮೊತ್ತದ ಅಂದಾಜು ಪಟ್ಟಿಗೆ ಲೆಕ್ಕ ಶೀರ್ಷಿಕೆ 4702-ಸಣ್ಣ ನೀರಾವರಿ ಮೇಲಿನ ಬಂಡವಾಳ ವೆಚ್ಚ (ನಬಾರ್ಡ್) ಅಡಿಯಲ್ಲಿ ಈ ಕೆಳಕಂಡ ಷರತ್ತಿಗೊಳಪಟ್ಟು ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

1. ಕಾಮಗಾರಿಯ ಪ್ರಕ್ರಿಯೆಯನ್ನು ಪ್ರಾರಂಭಿಸುವ ಮೊದಲು ಭೂಸ್ವಾಧೀನ ಪ್ರಕ್ರಿಯೆಯು ಪೂರ್ಣಗೊಂಡಿರುವ ಬಗ್ಗೆ ಖಚಿತಪಡಿಸಿಕೊಂಡು ಸಂಬಂಧಪಟ್ಟ ಕಾರ್ಯಪಾಲಕ ಅಭಿಯಂತರರು ಮತ್ತು ಅಧೀಕ್ಷಕ ಅಭಿಯಂತರರು ಸರ್ಕಾರಕ್ಕೆ ಜಂಟಿ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.
2. ಕಾಮಗಾರಿಯ ಅಂದಾಜು ಪಟ್ಟಿಯನ್ನು ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ರೂ.150 ಲಕ್ಷಕ್ಕೆ ಸೀಮಿತಗೊಳಿಸಿ ಪರಿಷ್ಕರಿಸುವುದು.
3. ಕಾಮಗಾರಿಯ ಬಗ್ಗೆ ಸಣ್ಣ ನೀರಾವರಿ ಇಲಾಖೆಯ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯು ದಿನಾಂಕ 29.3.2005ರಂದು ನಡೆದ 18ನೇ ಸಭೆಯ ನಡವಳಿಗಳಲ್ಲಿ ನೀಡಿರುವ ಸೂಚನೆಗಳನ್ನು ತಪ್ಪದೆ ಪಾಲಿಸತಕ್ಕದ್ದು (ಅನುಬಂಧ-1).
4. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಪ್ರಕಾರ ಕಾಮಗಾರಿಯನ್ನು ತೆಗೆದುಕೊಳ್ಳತಕ್ಕದ್ದು.
5. ಅನುಮೋದನೆ ನೀಡಲಾಗಿರುವ ಅಂದಾಜು ಮೊತ್ತದ ಮಿತಿಯಲ್ಲಿಯೇ ಹಾಗೂ ನಿಗದಿತ ಕಾಲಾವಧಿಯೊಳಗೆ ಕಾಮಗಾರಿಯನ್ನು ಪೂರ್ಣಗೊಳಿಸತಕ್ಕದ್ದು.

2) ಈ ಆದೇಶವನ್ನು ಆರ್ಥಿಕ ಇಲಾಖೆಯ ದಿನಾಂಕ: 20.1.2003ರ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎನ್. ಮಂಜುನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಸರ್ಕಾರದ ಆದೇಶ ಸಂಖ್ಯೆ: ಸನೀಇ 24 ಏನೀಯೋ 2005, ಬೆಂಗಳೂರು, ದಿನಾಂಕ: 25ನೇ ಮೇ 2005ರ

ಅನುಬಂಧ-1

**PROCEEDINGS OF THE EIGHTEENTH MEETING OF THE TECHNICAL APPRAISAL COMMITTEE HELD ON 29/3/2005, AT THE OFFICE OF THE CHIEF ENGINEER, MINOR IRRIGATION (SOUTH), BANGALORE.**

4.0 Construction of LIS near Ullagaddiwadi village in Chikkodi Taluk, Belgaum District. Estimated cost Rs. 16500 lakhs.

4.01 The compliance to the observations of TAC has been received from the project authorities.

4.02 The cost of the proposal is Rs.165.00 lakhs. The Cabinet Sub Committee has approved this work for Rs. 100.00 lakhs and placed before NABARD for assistance. Action will have to be taken by the Chief Engineer for arranging for balance Rs.65.00 lakhs in consultation with Government.

4.03 Action will have to be taken by the Department to form Lift irrigation societies and their concurrence is obtained with regard to maintenance of LIS by the society after this project is handed over.

4.04 It is intimated that backwaters of Hipparagi barrage would also be utilized for this LIS. Necessary concurrence in this regard will have to be obtained from the concerned Major Irrigation Project authorities before the estimate is technically sanctioned.

4.05 Subject to the above remarks, the proposal is cleared.

ಎಂ.ಎನ್. ಮಂಜುನಾಥ್

ಪಿ.ಆರ್. 731 ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:–** ಬೀದರ್ ಜಿಲ್ಲೆ ಬಕಚೌಡಿಯಲ್ಲಿರುವ ಕರಕುಶಲ ಸಹಕಾರ ಸಂಘ ನಿ. ಇವರಿಗೆ ಶ್ರೀಗಂಧವನ್ನು ಮಂಜೂರು ಮಾಡುವ ಬಗ್ಗೆ – ಆದೇಶ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ ಅಪಜೀ 49 ಎಫ್‌ಎಸ್‌ಡಬ್ಲ್ಯು 98 ದಿನಾಂಕ 04–08–1999.
2. ಸರ್ಕಾರದ ಆದೇಶ ಸಂಖ್ಯೆ. ಅಪಜೀ 38 ಎಫ್‌ಎಸ್‌ಡಬ್ಲ್ಯು 2003 ದಿನಾಂಕ 24–11–2003.
3. ಸರ್ಕಾರದ ಆದೇಶ ಸಂಖ್ಯೆ ಅಪಜೀ 07 ಎಫ್‌ಎಸ್‌ಡಬ್ಲ್ಯು 2003 ದಿನಾಂಕ 03–12–2003.
4. ಸರ್ಕಾರದ ಆದೇಶ ಸಂಖ್ಯೆ ಅಪಜೀ 09 ಎಫ್‌ಎಸ್‌ಡಬ್ಲ್ಯು 2002 ದಿನಾಂಕ 26–02–2004.
5. ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ರಕ್ಷಣೆ ಮತ್ತು ನಿರ್ವಹಣೆ), ಬೆಂಗಳೂರು ಇವರ ಕ್ರಮಾಂಕ (ಎ)/ಎಸ್‌ಡಿಎಲ್/ವಿಶ್ವ/ಸಿಆರ್–32/91–92 ದಿನಾಂಕ 30–12–2004ರ ಪತ್ರ.
6. ಅಧ್ಯಕ್ಷರು, ಕರಕುಶಲ ಕೈಗಾರಿಕಾ ಸಹಕಾರ ಸಂಘ ನಿಯಮಿತ, ಬಕಚೌಡಿ, ಬೀದರ್ ತಾಲ್ಲೂಕು ಮತ್ತು ಜಿಲ್ಲೆ ಇವರ ದಿನಾಂಕ 12–01–2005ರ ಮನವಿ.

**ಪ್ರಸ್ತಾವನೆ:**

ಮೇಲೆ(1) ರಲ್ಲಿ ಓದಲಾದ ಆದೇಶದಲ್ಲಿ ಕರಕುಶಲ ಕೈಗಾರಿಕಾ ಸಹಕಾರ ಸಂಘ ನಿಯಮಿತ, ಬಕಚೌಡಿ, ಬೀದರ್ ತಾಲ್ಲೂಕು ಮತ್ತು ಜಿಲ್ಲೆ ಇವರಿಗೆ 1999–2000ನೇ ಸಾಲಿನಿಂದ ಮೂರು ವರ್ಷಗಳವರೆಗೆ ವಾರ್ಷಿಕ 10 ಮೆಟ್ರಿಕ್ ಟನ್ ಶ್ರೀಗಂಧವನ್ನು ಸದರಿ ಆದೇಶದಲ್ಲಿ ವಿಧಿಸಿರುವ ಷರತ್ತಿಗೊಳಪಟ್ಟು ಸರಬರಾಜು ಮಾಡಲು ಮಂಜೂರಾತಿ ನೀಡಲಾಗಿತ್ತು.

ಮೇಲೆ (2) ರಲ್ಲಿ ಓದಲಾಗಿರುವ ಆದೇಶದಲ್ಲಿ ಶ್ರೀಗಂಧದ ಹಾರ್ಟ್ ವುಡ್ ಹಾಗೂ ಬಿಳಿ ಚಕ್ಕೆಯ ಚಿಲ್ಲರೆ ಮಾರಾಟದ ಬೆಲೆಯನ್ನು ನಿಗಧಿಗೊಳಿಸಲಾಗಿದೆ.

ಮೇಲೆ (3)ರಲ್ಲಿ ಓದಲಾಗಿರುವ ಆದೇಶದಲ್ಲಿ ಕರ್ನಾಟಕ ರಾಜ್ಯದಲ್ಲಿರುವ ಶ್ರೀಗಂಧದ ಡಿಪೋ ಮತ್ತು ಶ್ರೀಗಂಧದ ಕೋಠಿಗಳಲ್ಲಿ ಲಭ್ಯವಿರುವ ಶ್ರೀಗಂಧದ ಮರಗಳನ್ನು ಕರ್ನಾಟಕ ರಾಜ್ಯದಲ್ಲಿರುವ ಶ್ರೀಗಂಧ ಕರಕುಶಲಕರ್ಮಿಗಳ ಉಪಯೋಗಕ್ಕಾಗಿ ಕ್ರಮಾಂಕ ಅಪಜೀ 38 ಎಫ್‌ಎಸ್‌ಡಬ್ಲ್ಯು 2003 ದಿನಾಂಕ 24–11–2003ರಲ್ಲಿ ನಿಗಧಿಗೊಳಿಸಿದ ಮಾರುಕಟ್ಟೆ ದರದ ಶೇಕಡಾ 50ರಷ್ಟು ದರದಂತೆ ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮ ನಿಯಮಿತ ಇವರ ಮುಖಾಂತರ ವಿತರಿಸುವ ಸಲುವಾಗಿ ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು ಇವರಿಗೆ ಪೂರೈಸಲು ಮಂಜೂರಾತಿ ನೀಡಲಾಗಿದೆ.

ಮೇಲೆ (4) ರಲ್ಲಿ ಓದಲಾಗಿರುವ ಆದೇಶದಲ್ಲಿ ರಾಜ್ಯದಲ್ಲಿರುವ ಶ್ರೀಗಂಧದ ಕರಕುಶಲಕರ್ಮಿಗಳ ಉಪಯೋಗಕ್ಕಾಗಿ ಸರ್ಕಾರದ ಶ್ರೀಗಂಧದ ಕೋಠಿ/ ಶ್ರೀಗಂಧದ ಡಿಪೋಗಳಿಂದ ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಅಲ್ಲಿ ವಿಧಿಸಿರುವ ಷರತ್ತಿಗೊಳಪಟ್ಟು ಒಟ್ಟಾರೆ ಪ್ರಮಾಣವು ವಾರ್ಷಿಕವಾಗಿ 100 ಮೆಟ್ರಿಕ್ ಟನ್ ಮೀರದಂತೆ ಶ್ರೀಗಂಧವನ್ನು ಪೂರೈಸಲು ಆದೇಶಿಸಿದೆ.

ಮೇಲೆ (5) ರಲ್ಲಿನ ಪತ್ರದಲ್ಲಿ ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ರಕ್ಷಣೆ ಮತ್ತು ನಿರ್ವಹಣೆ), ಬೆಂಗಳೂರು ಇವರು ಕರಕುಶಲ ಕೈಗಾರಿಕಾ ಸಹಕಾರ ಸಂಘ, ನಿಯಮಿತ, ಬಕಚೌಡಿ, ಬೀದರ್ ತಾಲ್ಲೂಕು ಮತ್ತು ಜಿಲ್ಲೆ ಇವರಿಗೆ ಶ್ರೀಗಂಧವನ್ನು ಸರಬರಾಜು ಮಾಡುವ ಬಗ್ಗೆ ಸರ್ಕಾರದ ಆದೇಶವನ್ನು ಕೋರಿರುವರು.

ಮೇಲೆ (6) ರಲ್ಲಿನ ಪತ್ರದಲ್ಲಿ ಅಧ್ಯಕ್ಷರು, ಕರಕುಶಲ ಕೈಗಾರಿಕಾ ಸಹಕಾರ ಸಂಘ ನಿಯಮಿತ, ಬಕಚೌಡಿ, ಬೀದರ್ ತಾಲ್ಲೂಕು ಮತ್ತು ಜಿಲ್ಲೆ ಇವರು ಶ್ರೀಗಂಧವನ್ನು ಅರಣ್ಯ ಇಲಾಖೆಯಿಂದಲೇ ಪೂರೈಸುವಂತೆ ಸರ್ಕಾರವನ್ನು ಕೋರಿರುವರು.

ಪ್ರಸ್ತಾವನೆಯನ್ನು ಪರಿಶೀಲಿಸಿದೆ.

**ಆದೇಶ ಸಂಖ್ಯೆ ಅಪಜೀ 09 ಎಫ್‌ಎಸ್‌ಡಬ್ಲ್ಯು 2005, ಬೆಂಗಳೂರು, ದಿನಾಂಕ 23ನೇ ಮೇ 2005**

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಕರಕುಶಲ ಕೈಗಾರಿಕಾ ಸಹಕಾರ ಸಂಘ ನಿಯಮಿತ, ಬಕಚೌಡಿ, ಬೀದರ್ ಇದು ಒಂದು ಕರಕುಶಲ ಸಂಸ್ಥೆಯಾದ್ದರಿಂದ ಇವರಿಗೆ 2005-2006ನೇ ಸಾಲಿನಿಂದ ಮುಂದಿನ ಮೂರು ವರ್ಷಗಳವರೆಗೆ ಲಭ್ಯತೆಗೊಳಪಟ್ಟು ಶ್ರೀಗಂಧದ ಬಿಲ್ಲೆಟ್ಸ್ (ಕ್ಲಾಸ್ 1,2, ಮತ್ತು 3), ಘೋಟ್ಲ, ಘಟಬದ್ಲ, ಭಾಗಾರ್‌ದಾದ್, ರೂಟ್ಸ್ (1,2, ಮತ್ತು 3), ಜಾಜ್‌ಪೋಕಲ್ (1 ಮತ್ತು 2) ವರ್ಗದ ಶ್ರೀಗಂಧವನ್ನು ಶ್ರೀಗಂಧದ ಕರಕುಶಲ ಕರ್ಮಿಗಳಿಗಾಗಿ ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮ ನಿಯಮಿತ ಇವರಿಗೆ ಪೂರೈಸುತ್ತಿರುವಂತೆ ಮಾರುಕಟ್ಟೆ ದರದ ಶೇಕಡಾ 50ರ ದರದಲ್ಲಿ ವಾರ್ಷಿಕ 10 (ಹತ್ತು) ಮೆಟ್ರಿಕ್ ಟನ್‌ಗೆ ಸೀಮಿತಗೊಳಿಸಿ ಪೂರೈಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಕರಕುಶಲ ಕೈಗಾರಿಕಾ ಸಹಕಾರ ಸಂಘ, ನಿಯಮಿತ, ಬಕಚೌಡಿ, ಬೀದರ್ ಇವರಿಗೆ ಸರ್ಕಾರದಿಂದ ನೇರವಾಗಿ ವಾರ್ಷಿಕ 10 ಮೆಟ್ರಿಕ್ ಟನ್ ಶ್ರೀಗಂಧವನ್ನು ಪೂರೈಸಲು ಆದೇಶಿಸಿರುವುದರಿಂದ, ದಿನಾಂಕ 26ನೇ ಫೆಬ್ರವರಿ 2004 ಕ್ರಮಾಂಕ ಅಪಜೀ 09 ಎಫ್‌ಎಸ್‌ಡಬ್ಲ್ಯು 2002ರಲ್ಲಿ ಹೇಳಿರುವ ವಾರ್ಷಿಕ 100 ಮೆಟ್ರಿಕ ಟನ್ ಶ್ರೀಗಂಧಕ್ಕೆ ಬದಲಾಗಿ ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮ ನಿಯಮಿತಕ್ಕೆ 2005-2006ನೇ ಸಾಲಿನಿಂದ ಮುಂದಿನ ಮೂರು ವರ್ಷಗಳವರೆಗೆ ವಾರ್ಷಿಕ 90 ಮೆಟ್ರಿಕ್ ಟನ್‌ಗೆ ಸೀಮಿತಗೊಳಿಸಿ ಶ್ರೀಗಂಧವನ್ನು ಪೂರೈಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಹಾಗೂ ಅವರ ಹೆಸರಿನಲ್ಲಿ

**ಕೆ.ವಿ. ಜಯಲಕ್ಷ್ಮಿ**

ಪಿ.ಆರ್. 732

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**ENERGY SECRETARIAT**

**Sub:** Transfer of 0.8 M.W. Wind Power Capacity in favour of M/s R.D.S. Construction Company - Orders relating to:

**Read:**
1. Government order No: DE 26 NCE 1999 dated: 13.5.1999.
2. Government order No: EN 76 NCE 2005 dated: 18.3.2005.
3. Letter No. KRED/08/RDSCC/2005/821 dated 04.5.2005 received from the MD, KREDL, Bangalore received from the MD, KREDL, Bangalore.

**Preamble:-**

In the Government Order dated 18.3.2005 read at (2) above, sanction has been accorded for implementation of 192 M.W. capacity Wind Power Project at Jogimatti Wind Zone, Chitradurga, District to M/s Enercon India Ltd.

Now, the Managing Director, Karnataka Renewable Energy Development Limited, Bangalore in his letter dated 4.5.2005 read at (3) above, has recommended to the Government for transfer of 0.8 M.W. Wind Power capacity in favour of M/s R.D.S. Construction Company, at Lakkihalli village, Hiriyur Taluk, Chitradurga District from out of the sanctioned 192 M.W. capacity of M/s Enercon India Limited.

The proposal has been examined and pass the following order:

**Government Order No. EN 132 NCE 2005, Bangalore, Dated: 20th May 2005**

Government are pleased to accord sanction for transfer of 0.8 M.W. Wind Power capacity in favour of M/s R.D.S. Construction Company at Lakkihalli village, Hiriyur Taluk, Chitradurga District from out of the sanctioned 192 M.W. capacity of M/s Enercon India Ltd., allotted in Government Order DE 76 NCE 2005 dated 18.3.2005.

The terms and conditions of the Government Order read at (1) above, shall **IPSO FACTO** applicable.

By Order and in the name of the Governor of Karnataka,

**SURESH .B. KRISHNAPPANAVAR**

P.R. 733

Under Secretary to Government,

Energy Department.